**ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಎನ್‌ಸಿಇ 2013, ಬೆಂಗಳೂರು, ದಿನಾಂಕ: 28.2.2013.**

ಮೆ॥ ವಾಸ್ಗಿ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಗಾಜನೂರು ಗ್ರಾಮದ ಬಳಿ ತುಂಗಾ ನದಿಯ ಗಾಜನೂರು ಡ್ಯಾಮಿನ ಎಡದಂಡೆ ಕಾಲುವೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 0.65 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು **ದಿನಾಂಕ 08.01.2012 ರಿಂದ 07.12.2013 ರವರೆಗೆ** ಕೆಳಕಂಡ ಷರತ್ತಿಗೊಳಪಟ್ಟು ಕಾಲಾವಧಿಯನ್ನು ವಿಸ್ತರಿಸಲಾಗಿದೆ.

1. ಪ್ರತಿ ಮೆಗಾ ವ್ಯಾಟ್‌ಗೆ ರೂ 3.00 ಲಕ್ಷಗಳ ನೇರವೇರಿಕೆ ಖಾತರಿಯನ್ನು (Performance Guarantee) ಕೆ.ಆರ್.ಇ.ಡಿ.ಎಲ್.ಗೆ ಪಾವತಿಸತಕ್ಕದ್ದು.
2. ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.
3. ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**PR.990**

**SC25**

## ಇಂಧನ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಇಎನ್ 129 ಎನ್‌ಸಿಇ 2012 ಬೆಂಗಳೂರು, ದಿನಾಂಕ: 01.03.2013.**

ಮೆ : ಪಾವನಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 21.5 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿರುವ ಸರ್ಕಾರಿ ಆದೇಶ ಸಂಖ್ಯೆ: ಇಎನ್ 224 ಎನ್‌ಸಿಇ 2011 ದಿನಾಂಕ: 27.1.2012 ರ ಪ್ರಸ್ತಾವನೆ ಮತ್ತು ಆದೇಶ ಭಾಗದಲ್ಲಿ ಗುಲ್ಬರ್ಗಾ ಜಿಲ್ಲೆಯ ಶಾಪುರ ತಾಲ್ಲೂಕು ಮಾರಮ್ಮಕಲ್ ಗ್ರಾಮದ ಪ್ರದೇಶದಲ್ಲಿ ಕೃಷ್ಣಾ ನದಿಯ **"ಬಲ ದಂಡೆಗೆ ಅಡ್ಡಲಾಗಿ"** ಎಂಬುದರ ಬದಲಾಗಿ

**"ಎಡ ದಂಡೆಗೆ ಅಡ್ಡಲಾಗಿ"**

ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**PR.981**

**SC25**

## ಇಂಧನ ಸಚಿವಾಲಯ

**ವಿಷಯ:** ಮೆ: ಟಾಟಾ ಪವರ್ ಕಂಪನಿ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗರುವ 8.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 60.00 ಮೆ.ವ್ಯಾ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 255 ಎನ್‌ಸಿಇ 2011 ದಿನಾಂಕ: 10.6.2011.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 255 ಎನ್‌ಸಿಇ 2011 ದಿನಾಂಕ: 03.09.2011.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/TATA-8.00 to 60MW-Koppal/ 2012/ 999 ದಿನಾಂಕ: 30/31.03.2012.

4) ದಿನಾಂಕ 03.11.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಹನುಮಸಾಗರ ವಿಂಡ್ ಪವರ್ ಪ್ರಾಜೆಕ್ಟ್ಸ್ ಕಂಪನಿಗೆ ಕೊಪ್ಪಳ ಜಿಲ್ಲೆಯ ಹನುಮಸಾಗರ ತಾಲ್ಲೂಕಿನ ಮಾವಿನಯಿಟಗಿ, ಬೀಳಗಿ ಮತ್ತು ಚಂದ್ರಗಿರಿ ಗ್ರಾಮಗಳಲ್ಲಿ ಮಂಜೂರಾಗಿದ್ದ 8.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಟಾಟಾ ಪವರ್ ಕಂಪನಿ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡಿ ಆದೇಶಿಸಲಾಗಿತ್ತು. ಸದರಿ ಆದೇಶದ **Longitude** 76°59'35"- 76°2'31" ಇನ್ನು **Longitude**: 75°59'35"- 76°2'31" E ಎಂದು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ತಿದ್ದುಪಡಿ ಮಾಡಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಟಾಟಾ ಪವರ್ ಕಂಪನಿ ಲಿಮಿಟೆಡ್ ಕಂಪನಿಯವರಿಗೆ ಕೊಪ್ಪಳ ಜಿಲ್ಲೆಯ ಹನುಮಸಾಗರ ತಾಲ್ಲೂಕಿನ ಮಾವಿನಯಿಟಗಿ, ಬೀಳಗಿ ಮತ್ತು ಚಂದ್ರಗಿರಿ ಗ್ರಾಮಗಳಲ್ಲಿ ಮಂಜೂರಾಗಿರುವ 8.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 60.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವಂತೆ ಮತ್ತು ಯೋಜನೆಯನ್ನು 2013–14ರೊಳಗೆ ಅನುಷ್ಠಾನಗೊಳಿಸುವ ಷರತ್ತಿನೊಂದಿಗೆ ಹಾಗೂ ಯೋಜನಾ ಪ್ರದೇಶವು ಅರಣ್ಯ ಜಮೀನಾಗಿದ್ದು, ಅರಣ್ಯ ಇಲಾಖೆಯ ಅನುಮತಿ ಪಡೆಯತಕ್ಕದೆಂದು ಹಾಗೂ ಉತ್ಪಾದಿಸುವ ವಿದ್ಯುತ್ತನ್ನು ಸಂಬಂಧಪಟ್ಟ ಎಸ್ಕಾಂನೊಂದಿಗೆ ಪಿಪಿಎ ಮೂಲಕ ಸರಬರಾಜು ಮಾಡಬೇಕೆಂಬ ಷರತ್ತು ವಿಧಿಸಲು ಸೂಚಿಸಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯು ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಎನ್‌ಸಿಇ 2012, ಬೆಂಗಳೂರು, ದಿನಾಂಕ: 12.02.2013.**

ಮೆ : ಟಾಟಾ ಪವರ್ ಕಂಪನಿ ಲಿಮಿಟೆಡ್ ಇವರಿಗೆ ಕೊಪ್ಪಳ ಜಿಲ್ಲೆಯ ಹನುಮಸಾಗರ ತಾಲ್ಲೂಕಿನ ಮಾವಿನಯಿಟಗಿ, ಬೀಳಗಿ ಮತ್ತು ಚಂದ್ರಗಿರಿ ಗ್ರಾಮಗಳಲ್ಲಿ **ಮಂಜೂರಾಗಿರುವ 8.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 60.00 ಮೆ.ವ್ಯಾ. ಸಾಮರ್ಥ್ಯಕ್ಕೆ** ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಹೆಚ್ಚಿಸಿ** ಆದೇಶಿಸಿದೆ.

| Near by villages of the proposed area and District | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW | Total capacity including proposed enhancement in MW |
|---|---|---|---|---|---|
| Mavinitage, Bilgi and Chandragiri, Hanumasagar Taluk, Koppal District | The proposed area consists of two plateaus oriented in NW-SE and North-South direction and is located on the North and North-West of Hanumasagar town. The external features of the area depicts it is a open scrub and covered with boulders as per the SOI Map. The area is covered in the following Geographical co-oridinates :-<br>**Latitude**: 15°52'11"- 15°54'53" N<br>**Longitude**: 75°59'35"- 76°2'31" E<br>**Ridge peaks:** 701, 707 & 662m AMSL. | 8.00 MW | 52 MW | 40 Nos. x 1500 Kw | 60.00 |

1 **ಮೆ:: ಟಾಟಾ ಪವರ್ ಕಂಪನಿ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಟಾಟಾ ಪವರ್ ಕಂಪನಿ ಲಿಮಿಟೆಡ್** ರವರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

3 ಸದರಿ ಯೋಜನೆಗೆ ಅರಣ್ಯ ಇಲಾಖೆಯಿಂದ Forest Conservation Act ರಡಿಯಲ್ಲಿ ಅನುಮತಿ ಪಡೆಯತಕ್ಕದ್ದು.

4 ಅಭಿವೃದ್ಧಿದಾರರು ಸಾಮರ್ಥ್ಯ ವಿಸ್ತರಣಾ ಶುಲ್ಕವನ್ನು ಕ್ರೆಡಲ್ ಸಂಸ್ಥೆಯೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮುಂಚೆ ಪಾವತಿಸತಕ್ಕದ್ದು.

5 ಸದರಿ ಯೋಜನೆಯನ್ನು 2013–14 ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

6 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR.986**
**SC25**

## ಇಂಧನ ಸಚಿವಾಲಯ

**ವಿಷಯ:** ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 11.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 1.25 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಐಟಿಸಿ ಲಿಮಿಟೆಡ್, (M/s ITC Limited) ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 98 ಎನ್‌ಸಿಇ 2000 ದಿನಾಂಕ: 10.7.2000.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 172 ಎನ್‌ಸಿಇ 2011 ದಿನಾಂಕ: 17.7.2012.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/ITC-1.25 MW(MNK-005)-(SEL-11.25MW)/Bambargi/2012/348 ದಿನಾಂಕ: 11.02.2013

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಈ ಕೆಳಕಂಡಂತೆ 98 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯು ಹಂಚಿಕೆಯಾಗಿತ್ತು.

| District | Location | MW |
|---|---|---|
| Belgaum | Chikkodi | 19 |
| | Hanumanahatti | 26 |
| Bellary | Sogi (South) | 9 |
| | Gujanur | 3 |
| Hassan | Haradanahalli | 23 |
| Chitradurga | Jogimatti-1 | 18 |
| | **TOTAL** | **98** |

ಈ ಸಾಮರ್ಥ್ಯದಲ್ಲಿ 53.00 ಮೆ.ವ್ಯಾ. ಸಾಮರ್ಥ್ಯವು ಈಗಾಗಲೇ ಅನುಷ್ಠಾನಗೊಂಡಿರುತ್ತದೆ.

ಮೇಲಿನ ಆದೇಶದಲ್ಲಿ ಸದರಿ ಕಂಪನಿಗೆ ಬೆಳಗಾವಿ ಜಿಲ್ಲೆಯ ಹನುಮನಹಟ್ಟಿ ಪ್ರದೇಶದಲ್ಲಿ ಹಂಚಿಕೆಯಾಗಿದ್ದ 26.00 ಮೆ.ವ್ಯಾ ಪವನ ವಿದ್ಯುತ್ ಯೋಜನೆಯಲ್ಲಿ ಬಂಬರ್ಗಿ ಗ್ರಾಮದಲ್ಲಿ ಬರುವ 14.75 ಮೆ,ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸ್ಥಳವು ಬೆಳಗಾವಿ ವಿಮಾನ ನಿಲ್ದಾಣದ ಸಮೀಪದಲ್ಲಿ ಬರುವುದರಿಂದ ಅನುಷ್ಠಾನಗೊಳಿಸಲು ಸಾಧ್ಯವಾಗದ ಕಾರಣದಿಂದ ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರದ್ದುಪಡಿಸಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯ ಹನುಮನಹಟ್ಟಿ ಪ್ರದೇಶದಲ್ಲಿ ಹಂಚಿಕೆಯಾಗಿದ್ದ 26.00 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯದಲ್ಲಿ 14.75 ಮೆ.ವ್ಯಾ. ಸಾಮರ್ಥ್ಯವವನ್ನು ರದ್ದುಗೊಳಿಸಿದ್ದು, ಬಾಕಿ ಉಳಿದಿರುವ 11.25 ಮೆ.ವ್ಯಾ ಪವನ ವಿದ್ಯುತ್ ಯೋಜನೆಯಲ್ಲಿ 1.25 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಐಟಿಸಿ ಲಿಮಿಟೆಡ್, ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಪ್ರಸ್ತುತ ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು ದಿನಾಂಕ 31.03.2013ರೊಳಗೆ ಅನುಷ್ಠಾನಗೊಳಿಸಲಾಗುವುದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡಲಾಗುವುದು ಮತ್ತು ಸ್ವಂತಕ್ಕೆ ಬಳಕೆಗಾಗಿ ಉಪಯೋಗಿಸಿಕೊಳ್ಳಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 60 ಎನ್‌ಸಿಇ 2013, ಬೆಂಗಳೂರು, ದಿನಾಂಕ: 04.03.2013.**

ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ಹನುಮನಹಟ್ಟಿ ಪ್ರದೇಶದಲ್ಲಿ ಮಂಜೂರಾಗಿರುವ 11.25 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ **1.25 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಐಟಿಸಿ ಲಿಮಿಟೆಡ್ (M/s ITC Limited) ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

| Village Name | Taluk & District | MW | Land Survey Number | WTG's No. | Extent of Land per WTG (Acres) | Latitude, Longitude and Ridge Peaks |
|---|---|---|---|---|---|---|
| Bombarge | Belgaum/ Belgaum | 1.25 | 152/1 152/3, 152/4 & 153 | MNK-05 | 1.25 | Latitude: 15°58'45.8''-N Longitude: 74°28'16.6''-E |

1 **ಮೆ:: ಐಟಿಸಿ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಐಟಿಸಿ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಮತ್ತು ಸ್ವಂತಕ್ಕೆ ಬಳಸಿಕೊಳ್ಳಲು ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 31.03.2013ರಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

4 ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR.992**
**SC25**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಬಿಡದಿ ಕೈಗಾರಿಕಾ ಪ್ರದೇಶದಲ್ಲಿ ಜಮೀನು ಸಮತಟ್ಟು ಮಾಡುವ ಕಾಮಗಾರಿಯ ಗುತ್ತಿಗೆದಾರರಿಗೆ ಹೆಚ್ಚುವರಿ ಹಣ ಪಾವತಿಸಿರುವ ಕುರಿತು

**ಓದಲಾಗಿದೆ:** (1) ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ: ಕೆ.ಐ.ಎ.ಡಿ.ಬಿ/ ಕೇಂಕ/ 8677/ 2011-12, ದಿನಾಂಕ: 29.09.2011, 07.01.2013, 02.03.2013 ಮತ್ತು 07.03.2013

(2) ಶ್ರೀ ಡಿ.ಸಿ. ತಮ್ಮಣ್ಣ ಇವರು ಮಾನ್ಯ ಮುಖ್ಯಮಂತ್ರಿಯವರಿಗೆ ವಿಳಾಸಿಸಿ ಸಲ್ಲಿಸಿದ ದಿನಾಂಕ: (ಇಲ್ಲ) ಮನವಿ

**ಪ್ರಸ್ತಾವನೆ :**

2000-2001ನೇ ಸಾಲಿನ ದಿನಾಂಕ: 31.03.2001ಕ್ಕೆ ಅಂತ್ಯಗೊಂಡ ಸಿ.ಎ.ಜಿ. ವರದಿಯ ಕಂಡಿಕೆ: 6.3ರಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಬಿಡದಿ ಕೈಗಾರಿಕಾ ಪ್ರದೇಶದಲ್ಲಿ ಜಮೀನು ಸಮತಟ್ಟು ಮಾಡುವ ಕಾಮಗಾರಿಗಳಲ್ಲಿ ಸಂಬಂಧಪಟ್ಟ ಗುತ್ತಿಗೆದಾರರಿಗೆ ಅನುಕೂಲ ಉಂಟುಮಾಡಲು ಹೆಚ್ಚುವರಿ ಹಣ ಬಿಡುಗಡೆ ಮಾಡಿ, ಕೆ.ಐ.ಎ.ಡಿ.ಬಿ.ಗೆ ₹ 17.97 ಕೋಟಿಗಳಷ್ಟು ನಷ್ಟ ಉಂಟಾಗಲು ಮಂಡಳಿಯ ಕೆಲವು ಅಧಿಕಾರಿ / ನೌಕರರು ಕಾರಣರಾಗಿರುತ್ತಾರೆ ಎಂದು ಉಲ್ಲೇಖಿಸಲಾಗಿರುತ್ತದೆ.

ಈ ಪ್ರಕರಣದ ಕುರಿತು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಈ ಕೆಳಗಿನಂತೆ ಅಭಿಪ್ರಾಯವನ್ನು ನೀಡಿರುತ್ತದೆ:

> **" ಬಿಡದಿ ಕೈಗಾರಿಕಾ ಪ್ರದೇಶದಲ್ಲಿ ಜಮೀನು ಸಮತಟ್ಟು ಮಾಡುವ ಸಂದರ್ಭದಲ್ಲಿ ಗುತ್ತಿಗೆದಾರರಿಗೆ ಹೆಚ್ಚುವರಿ ಹಣ ಪಾವತಿಸಿ, ಸರ್ಕಾರಕ್ಕೆ ನಷ್ಟ ಮಾಡಲಾಗಿದೆ ಎಂಬ ವಿಷಯಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಶಿಫಾರಸ್ಸಿನ ಹಿನ್ನೆಲೆಯಲ್ಲಿ ಹಾಗೂ ಮಾಡಲಾದ ಆರೋಪಗಳ ಸ್ವರೂಪವನ್ನು ಗಮನಿಸಿದರೆ, ಪ್ರಸ್ತುತ ಪ್ರಕರಣದಲ್ಲಿ ಸಿ.ಓ.ಡಿ. ಮೂಲಕ ತನಿಖೆ ಮಾಡುವುದು ಸೂಕ್ತವೆಂದು ಕಂಡು ಬರುತ್ತದೆ. ಅಂತಹ ತನಿಖೆಯಲ್ಲಿ ಸಂಬಂಧಪಟ್ಟವರು ಕ್ರಿಮಿನಲ್ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದರೆ, ಅವರ ವಿರುದ್ಧ ಕ್ರಿಮಿನಲ್ ಪ್ರಕರಣವನ್ನು ದಾಖಲಿಸಬಹುದಾಗಿದೆ. "**

ಸಾರ್ವಜನಿಕ ಲೆಕ್ಕಪತ್ರ ಸಮಿತಿಯು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ದಿನಾಂಕ: 13.01.2011ರಂದು ಕೆಲವೊಂದು ಅಂಶಗಳ ಕುರಿತು ಶಿಫಾರಸ್ಸುಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಶಿಫಾರಸ್ಸಿನ ಕುರಿತು ದಿನಾಂಕ: 27.08.2011ರಂದು ನಡೆದ ಮಂಡಳಿ ಸಭೆಯಲ್ಲಿ ಸುದೀರ್ಘವಾಗಿ ಚರ್ಚಿಸಿದ್ದು, ಈ ಪ್ರಕರಣದಲ್ಲಿ ಭಾಗಿಯಾಗಿರುವ ಮತ್ತು ಈಗಾಗಲೇ ಗುರುತಿಸಲ್ಪಟ್ಟಿರುವ ಮಂಡಳಿಯ ಅಧಿಕಾರಿ / ನೌಕರರು ಹಾಗೂ ಎರವಲು ಸೇವೆಯ ಮೇಲೆ ಕಾರ್ಯ ನಿರ್ವಹಿಸಿದ ಅಧಿಕಾರಿಗಳ ಸೇವಾ ವಿವರಗಳನ್ನು ನಮೂದಿಸಿ, ಅಂತಹವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ಈ ಪ್ರಕರಣವನ್ನು ಸಂಬಂಧಪಟ್ಟ ದಾಖಲೆಗಳೊಂದಿಗೆ ಸದರಿ ಪ್ರಕರಣವನ್ನು ಸಿ.ಓ.ಡಿ.ಗೆ ವಹಿಸಲು ಮಂಡಳಿಯು ಸರ್ಕಾರಕ್ಕೆ ಶಿಫಾರಸ್ಸು ಮಾಡಿತ್ತು.

ದಿನಾಂಕ: 10.08.2012, 23.08.2012ರಂದು ಹಾಗೂ 21.09.2012ರಂದು ನಡೆದ ಸಚಿವ ಸಂಪುಟದ ಸಭೆಗಳಲ್ಲಿ ಈ ಪ್ರಕರಣದ ಕುರಿತು ಚರ್ಚಿಸಿದ್ದು, ದಿನಾಂಕ: 21.09.2012ರ ಸಭೆಯಲ್ಲಿ ಈ ವಿಷಯವನ್ನು ಸಂಪೂರ್ಣವಾದ ವಿವರಗಳೊಂದಿಗೆ ಪುನರ್ ಮಂಡಿಸುವಂತೆ ಆದೇಶಿಸಲಾಗಿತ್ತು. ಈ ಹಂತದಲ್ಲಿ ಶ್ರೀ ಡಿ.ಸಿ. ತಮ್ಮಣ್ಣ ಇವರು ಮಾನ್ಯ ಮುಖ್ಯಮಂತ್ರಿಯವರಿಗೆ ಮನವಿ ಸಲ್ಲಿಸಿ, ಖಾಸಗಿ ದೂರಿನ ಮೇರೆಗೆ ತಮ್ಮ ವಿರುದ್ಧ ಕೆಲವು ಆರೋಪಗಳ ಬಗ್ಗೆ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಮೊಕದ್ದಮೆ ಸಂಖ್ಯೆ: 06/2011 ರನ್ವಯ ದಿನಾಂಕ: 25.02.2011ರಂದು ಪ್ರಕರಣ ದಾಖಲಾಗಿದ್ದು ಲೋಕಾಯುಕ್ತ ಪೋಲೀಸರು ಸುದೀರ್ಘ ತನಿಖೆ ನಡೆಸಿ, ಎಲ್ಲಾ ಆರೋಪಗಳೂ ಆಧಾರ ರಹಿತವಾಗಿರುವ ಕಾರಣ, **"B"** ಅಂತಿಮ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಒಂದೇ ಆರೋಪಕ್ಕೆ ಎರಡು ಬಾರಿ ತನಿಖೆ ನಡೆಸುವುದು ದೋಷಪೂರಿತವಾಗಿರುವುದರಿಂದ ತನಿಖೆಯ ಆದೇಶವನ್ನು ಕೈಬಿಡುವಂತೆ ಓದಲಾದ (2)ರಲ್ಲಿ ಕೋರಿರುತ್ತಾರೆ.

ಅಂತೆಯೇ ಈ ಪ್ರಕರಣದ ಕುರಿತು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವಂತೆ ಕೆ.ಐ.ಎ.ಡಿ.ಬಿ.ಯನ್ನು ಕೋರಿದ್ದು, ಮಂಡಳಿಯು ತನ್ನ ದಿನಾಂಕ: 07.03.2013ರ ಪತ್ರದ 2ನೇ ಕಂಡಿಕೆಯಲ್ಲಿ ಈ ಕೆಳಗಿನಂತೆ ಸ್ಪಷ್ಟೀಕರಿಸಿರುತ್ತದೆ:

> **". . . ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ದಾಖಲಾದ ಖಾಸಗಿ ದೂರಿನ ಮೇಲೆ ಸದರಿ ಪ್ರಕರಣದಲ್ಲಿನ ಆರೋಪಗಳ ಬಗ್ಗೆ ಮಾನ್ಯ ಲೋಕಾಯುಕ್ತ ಸಂಸ್ಥೆಯು ಪ್ರಿನ್ಸಿಪಲ್ ಸೆಷನ್ಸ್ ಜಡ್ಜ್‌ರವರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ಸಲ್ಲಿಸಿರುವ ಅಂತಿಮ ವರದಿಯಲ್ಲಿ ಇತರೆ ವಿಷಯಗಳ ತನಿಖೆಯ ಜೊತೆಗೆ ಭಾಗ-1ರಲ್ಲಿ ಮಂಡಳಿಯು ಬಿಡದಿ ಕೈಗಾರಿಕಾ ಪ್ರದೇಶದಲ್ಲಿನ ಮೆ: ಟಿ.ಕೆ.ಎಂ.ಎಲ್. ಸಂಸ್ಥೆಯ ಕೈಗಾರಿಕಾ ಯೋಜನೆಯ ಅಭಿವೃದ್ಧಿ ಕಾಮಗಾರಿಯಲ್ಲಿ ನಡೆದಿರುವ ಲೋಪ-ದೋಷಗಳಿಗೆ ಸಂಬಂಧಿಸಿದಂತೆ ಸಿ.ಎ.ಜಿ. ವರದಿಯ ಕಂಡಿಕೆ: 6.3 ರ ಅಂಶಗಳ ಬಗ್ಗೆ ಮಾಡಿರುವ ತನಿಖೆಯ ವಿವರಗಳನ್ನು ಪುಟ ಸಂಖ್ಯೆ: 51 ರಿಂದ 76 ರವರೆಗೆ ನಮೂದಿಸಲಾಗಿರುತ್ತದೆ . . ."**

ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಮೊಕದ್ದಮೆ ಸಂ: 06/11 ಕಲಂ 13(1)(ಡಿ), 13(1)(ಇ) ಸಹಿತ 13/2 ಪಿ.ಸಿ. ಕಾಯ್ದೆ 1988ರಲ್ಲಿ ಸಲ್ಲಿಸಿರುವ ಅಂತಿಮ ವರದಿಯಲ್ಲಿ, ಸಿ.ಎ.ಜಿ. ವರದಿಯ ಕಂಡಿಕೆ: 6.3ರಲ್ಲಿನ ಅಂಶಗಳ ಬಗ್ಗೆಯೂ ಸಹ ತನಿಖೆಯನ್ನು ನಡೆಸಿದ್ದು, ವರದಿಯಲ್ಲಿ ಉಲ್ಲೇಖಿಸಿರುವ ಕಾರಣಗಳಿಂದಾಗಿ " .... *ಆರೋಪಿತರು ಅಧಿಕಾರ ದುರುಪಯೋಗಪಡಿಸಿರುವುದು ಸಾಕ್ಷ್ಯಾಧಾರಗಳಿಂದ ಸಾಬೀತಾಗದೇ ಇರುವುದರಿಂದ, ಮತ್ತು ಕೇವಲ ಶೇಕಡಾ 9.26ರಷ್ಟು ಮಾತ್ರ ಹೆಚ್ಚುವರಿ ಆಸ್ತಿಯನ್ನು ಪರಿಶೀಲನಾ ಅವಧಿಯಲ್ಲಿ ಹೊಂದಿರುವುದರಿಂದ ಈ ಪ್ರಕರಣದಲ್ಲಿ* **"B"** *ಅಂತಿಮ ವರದಿಯನ್ನು ಸಲ್ಲಿಸಲು ಅನುಮತಿ ನೀಡಬಹುದಾಗಿ ಕೋರಲಾಗಿದೆ ....* " ಎಂದು ತನಿಖಾಧಿಕಾರಿಯವರು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ದಿನಾಂಕ: 07.01.2013ರಂದು ನೀಡಿರುವ ತೀರ್ಪಿನಲ್ಲಿ " *'**B**' report filed by the I.O is accepted* " ಎಂದು ಪ್ರಧಾನ ಜಿಲ್ಲಾ ಸತ್ರ ವಿಶೇಷ ನ್ಯಾಯಾಲಯವು ತೀರ್ಪನ್ನು ನೀಡಿರುತ್ತದೆ.

ಈ ಪ್ರಕರಣವನ್ನು ದಿನಾಂಕ: 12.03.2013ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ (ಪ್ರಕರಣ ಸಂಖ್ಯೆ: ಸಿ–290/2013) ಕೂಲಂಕಷವಾಗಿ ಪರಿಶೀಲಿಸಿದ್ದು, ಅಂತೆಯೇ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 372 ಎಸ್‌ಪಿಕ್ಯೂ 2012, ಬೆಂಗಳೂರು, ದಿನಾಂಕ: 11.07.2013**

ಬಿಡದಿ ಕೈಗಾರಿಕಾ ಪ್ರದೇಶದ ಜಮೀನು ಸಮತಟ್ಟು ಮಾಡುವ ಕಾಮಗಾರಿಗಳಲ್ಲಿ ಸಂಬಂಧಪಟ್ಟ ಗುತ್ತಿಗೆದಾರರಿಗೆ ಅನುಕೂಲ ಉಂಟುಮಾಡಲು ಹೆಚ್ಚುವರಿ ಹಣ ಬಿಡುಗಡೆ ಮಾಡಿ ಕೆ.ಐ.ಎ.ಡಿ.ಬಿ.ಗೆ ₹17.97 ಕೋಟಿಗಳ ನಷ್ಟ ಉಂಟಾಗಲು ಮಂಡಳಿಯ ಕೆಲವು ಅಧಿಕಾರಿ / ನೌಕರರು ಕಾರಣರಾಗಿರುವರೆಂಬ ಆರೋಪದ ಹಿನ್ನೆಲೆಯಲ್ಲಿ ಈ ಪ್ರಕರಣದ ಬಗ್ಗೆ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ತನಿಖೆ ನಡೆಸಿದ್ದು, ಈ ಪ್ರಕರಣದಲ್ಲಿನ ಆರೋಪಗಳು ಸಾಕ್ಷ್ಯಾಧಾರಗಳಿಂದ ಸಾಬೀತಾಗದ ಕಾರಣ, **"B"** ಅಂತಿಮ ವರದಿಯನ್ನು ಸಲ್ಲಿಸಿದ್ದು, ದಿನಾಂಕ: 07.01.2013ರಂದು ನೀಡಿರುವ ತೀರ್ಪಿನಲ್ಲಿ **" 'B' report filed by the I.O is accepted "** ಎಂದು ಪ್ರಧಾನ ಜಿಲ್ಲಾ ಸತ್ರ ವಿಶೇಷ ನ್ಯಾಯಾಲಯವು ತೀರ್ಪನ್ನು ನೀಡಿರುವ ಹಿನ್ನೆಲೆಯಲ್ಲಿ ಈ ಪ್ರಕರಣದ ಕುರಿತು ಮುಂದಿನ ಕ್ರಮದ ಅವಶ್ಯಕತೆ ಇರುವುದಿಲ್ಲವೆಂದು ನಿರ್ಣಯಿಸಿ ಮುಕ್ತಾಯಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR.1196**

**SC.50**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಮೊಹಮ್ಮದ್ ಷಫಿ ಕಾಗದಗಾರ್, ನೋಟರಿ, ಗದಗ ಕಂದಾಯ ತಾಲ್ಲೂಕು ಗದಗ ಜಿಲ್ಲೆ ಇವರ ಹೆಸರನ್ನು ನೋಟರಿ ಪಟ್ಟಿಯಿಂದ ಶಾಶ್ವತವಾಗಿ ತೆಗೆಯುವ ಬಗ್ಗೆ

**ಓದಲಾಗಿದೆ :**

1. ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ದಿನಾಂಕ: 18–06–2012
2. ಅರೆ ಸರ್ಕಾರಿ ಪತ್ರ ಸಂಖ್ಯೆ: ಲಾ 153 ಎಲ್‌ಸಿಎಲ್ 2012, ದಿನಾಂಕ: 31–08–2012
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರ ಪತ್ರ ದಿನಾಂಕ: 22–09–2012

**ಪ್ರಸ್ತಾವನೆ :**

ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಓದಲಾದ (1)ರ ದಿನಾಂಕ: 18–06–2012ರ ಪ್ರಸ್ತಾವನೆಯಲ್ಲಿ, ಶ್ರೀ ಮೊಹಮ್ಮದ್ ಷಫಿ ಕಾಗದಗಾರ್, ನೋಟರಿ, ಗದಗ ಜಿಲ್ಲೆ ಇವರು ಸಾವಿರಾರು ಗಟ್ಟಲೆ ನೋಟರಿ ಬಗ್ಗೆ ಇ–ಸ್ಟಾಂಪನ್ನು ಸ್ಥಳೀಯ ಸೌಹಾರ್ದ ಪತ್ತಿನ ಸಂಘಗಳಲ್ಲಿ ಖರೀದಿಸಿ ಹಾಗೂ ಕೆಲವು ಸ್ಟಾಂಪನ್ನು ಜೆರಾಕ್ಸ್ ಮಾಡಿ ಖಾಲಿ ಬಿಳಿ ಈ ಸ್ಟಾಂಪಿನ ಮೇಲೆ ಸರಕಾರಿ ಮೊಹರು ಹಾಗೂ ತಮ್ಮ ಸಹಿಯನ್ನು ಹಾಕಿ ತಮ್ಮ ಏಜೆಂಟರ ಮುಖಾಂತರ ಮುಂಡರಗಿ, ಶಿರಹಟ್ಟಿ ಹಾಗೂ ಗದಗದಲ್ಲಿ ಸ್ಟಾಂಪವೆಂಡರ ಮುಖಾಂತರ ಮಾರಾಟ ಮಾಡುತ್ತಿದ್ದಾರೆಂದೂ, ಹಾಗೂ ನೋಟರಿಯವರು ಅರ್ಬಾದ್ ಕೋ–ಆಪ್, ಸೌಹಾರ್ದ ಕ್ರೆಡಿಟ್ ಸಹಕಾರಿ ಸಂಘ, ಮುಳಗುಂದ ತಾಲ್ಲೂಕು, ಗದಗ ಜಿಲ್ಲೆ ಇವರ (ಫ್ರಾಂಚೈಸಿ) ಸಹಯೋಗದೊಂದಿಗೆ ಕೆಲವು ಶಾಖೆಗಳನ್ನು ಹೊಂದಿದ್ದು, ಸದರಿಯವರು ತಮ್ಮ ಇ–ಸ್ಟಾಂಪ್ ಮಾರಾಟದ ಶಾಖೆಗಳಲ್ಲಿ ಬಿಳಿ ಹಾಳೆಯ ಮೇಲೆ ತಮ್ಮ ಸಹಿ ಹಾಗೂ ನೋಟರಿ ಮೊಹರಿನೊಂದಿಗೆ ತಮ್ಮ ಏಜೆಂಟರ ಮುಖಾಂತರ ಕಾನೂನು ಬಾಹಿರವಾಗಿ, ರಾಜಾರೋಶವಾಗಿ ಕೃತಿಯನ್ನು ಮಾಡುತ್ತಿದ್ದಾರೆಂದೂ, ಅವರ ಮೇಲೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಬೇಕೆಂದೂ ಹಾಗೂ ಬಿಳಿ ಖಾಲಿ ಇ–ಸ್ಟಾಂಪ್ ನೋಟರಿ ಸಹಿ ಇರುವುದನ್ನು ದಾಖಲೆಗಳ ಸಹಿತ ಕಿರಿಯ ನ್ಯಾಯವಾದಿಗಳ ಸಂಘ, ಗದಗ ಜಿಲ್ಲೆ ಇವರು ಸಲ್ಲಿಸಿರುವ ದೂರನ್ನು ಲಗತ್ತಿಸಿ ಸರ್ಕಾರಕ್ಕೆ ರವಾನಿಸಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ : 31–08–2012ರ ಅರೆ ಸರ್ಕಾರದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರಿಗೆ ಸದರಿ ಶ್ರೀ ಮೊಹಮ್ಮದ್ ಷಫಿ ಕಾಗದಗಾರ್, ನೋಟರಿ, ಇವರ ವಿರುದ್ಧ ಸ್ವೀಕೃತವಾದ ದೂರಿನ ಪ್ರತಿಗಳನ್ನು ಕಳುಹಿಸಿ, ಸದರಿಯವರ ಕಾರ್ಯವೈಖರಿ ಮತ್ತು ಫಿರ್ಯಾಧಿನಲ್ಲಿರುವ ಅಂಶಗಳ ಸತ್ಯಾಸತ್ಯತೆಯ ಬಗ್ಗೆ ಪರಿಶೀಲಿಸಿ ವರದಿ ಕಳುಹಿಸುವಂತೆ ಕೋರಲಾಗಿತ್ತು.

ಅದರಂತೆ, ಓದಲಾದ (3)ರ ದಿನಾಂಕ: 22–09–2012ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರು ಸದರಿ ಶ್ರೀ ಮೊಹಮ್ಮದ್ ಷಫಿ ಕಾಗದಗಾರ್, ನೋಟರಿ, ಇವರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ನೋಟರಿ ಹುದ್ದೆಯನ್ನು ತಮ್ಮ ದಂಧೆಯನ್ನಾಗಿಸಿಕೊಂಡಿದ್ದಾರೆಂದೂ, ಇಂತಹ ನೋಟರಿಗಳು ಸಮಾಜಕ್ಕೆ ಕೆಡಕುಂಟು ಮಾಡುತ್ತಾರೆಂದು ಹಾಗೂ ನೋಟರಿಯವರು ಕರ್ತವ್ಯಲೋಪ ಎಸಗಿದ್ದಾರೆಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 153 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ : 23ನೇ ಆಗಸ್ಟ್, 2013**

ಶ್ರೀ ಮೊಹಮ್ಮದ್ ಷಫಿ ಕಾಗದಗಾರ್, ನೋಟರಿ, ಗದಗ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದು ರುಜುವಾತಾದ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12)(ಬಿ) (1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ಶಾಶ್ವತವಾಗಿ ಇವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ಲಕ್ಷ್ಮೀನರಸಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**PR 1045**

**SC 15**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಹರೀಂದ್ರ ವಾಸುದೇವ ಭಟ್, ನೋಟರಿ, ಗದಗ ಕಂದಾಯ ತಾಲ್ಲೂಕು ಗದಗ ಜಿಲ್ಲೆ ಇವರ ಹೆಸರನ್ನು ನೋಟರಿ ಪಟ್ಟಿಯಿಂದ ಶಾಶ್ವತವಾಗಿ ತೆಗೆಯುವ ಬಗ್ಗೆ

**ಓದಲಾಗಿದೆ :**
1. ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ದಿನಾಂಕ: 18–06–2012
2. ಸರ್ಕಾರದ ಪತ್ರ ಸಂಖ್ಯೆ: ಲಾ 166 ಎಲ್‌ಸಿಎಲ್ 2012, ದಿನಾಂಕ: 26–07–2012
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರ ಪತ್ರ ದಿನಾಂಕ: 22–09–2012

**ಪ್ರಸ್ತಾವನೆ :**

ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಓದಲಾದ (1)ರ ದಿನಾಂಕ: 18–06–2012ರ ಪ್ರಸ್ತಾವನೆಯಲ್ಲಿ, ಶ್ರೀ ಹರೀಂದ್ರ ವಾಸುದೇವ ಭಟ್, ನೋಟರಿ, ಗದಗ ಜಿಲ್ಲೆ ಇವರು ಸಾವಿರಾರು ಗಟ್ಟಲೆ ನೋಟರಿ ಬಗ್ಗೆ ಇ–ಸ್ಟಾಂಪನ್ನು ಸ್ಥಳೀಯ ಸೌಹಾರ್ದ ಪತ್ತಿನ ಸಂಘಗಳಲ್ಲಿ ಖರೀದಿಸಿ ಹಾಗೂ ಕೆಲವು ಸ್ಟಾಂಪನ್ನು ಜೆರಾಕ್ಸ್ ಮಾಡಿ ಖಾಲಿ ಬಿಳಿ ಈ ಸ್ಟಾಂಪಿನ ಮೇಲೆ ಸರಕಾರಿ ಮೊಹರು ಹಾಗೂ ತಮ್ಮ ಸಹಿಯನ್ನು ಹಾಕಿ ತಮ್ಮ ಏಜೆಂಟರ ಮುಖಾಂತರ ಮುಂಡರಗಿ, ಶಿರಹಟ್ಟಿ ಹಾಗೂ ಗದಗದಲ್ಲಿ ಸ್ಟಾಂಪವೆಂಡರ ಮುಖಾಂತರ ಮಾರಾಟ ಮಾಡುತ್ತಿದ್ದಾರೆಂದೂ, ಅವರ ಮೇಲೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಬೇಕೆಂದೂ ಹಾಗೂ ಬಿಳಿ ಖಾಲಿ ಇ–ಸ್ಟಾಂಪ್ ನೋಟರಿ ಸಹಿ ಇರುವುದನ್ನು ದಾಖಲೆಗಳ ಸಹಿತ ಕಿರಿಯ ನ್ಯಾಯವಾದಿಗಳ ಸಂಘ, ಗದಗ ಜಿಲ್ಲೆ ಇವರು ಸಲ್ಲಿಸಿರುವ ದೂರನ್ನು ಲಗತ್ತಿಸಿ ಸರ್ಕಾರಕ್ಕೆ ರವಾನಿಸಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ : 26–07–2012ರ ಸರ್ಕಾರದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರಿಗೆ ಸದರಿ ಶ್ರೀ ಹರೀಂದ್ರ ವಾಸುದೇವ ಭಟ್, ನೋಟರಿ ಇವರ ವಿರುದ್ಧ ಸ್ವೀಕೃತವಾದ ದೂರಿನ ಪ್ರತಿಗಳನ್ನು ಕಳುಹಿಸಿ, ಸದರಿಯವರ ಕಾರ್ಯವೈಖರಿ ಮತ್ತು ಫಿರ್ಯಾಧಿನಲ್ಲಿರುವ ಅಂಶಗಳ ಸತ್ಯಾಸತ್ಯತೆಯ ಬಗ್ಗೆ ಪರಿಶೀಲಿಸಿ ವರದಿ ಕಳುಹಿಸುವಂತೆ ಕೋರಲಾಗಿತ್ತು.

ಅದರಂತೆ, ಓದಲಾದ (3)ರ ದಿನಾಂಕ: 22–09–2012ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರು ಸದರಿ ಶ್ರೀ ಹರೀಂದ್ರ ವಾಸುದೇವ ಭಟ್, ನೋಟರಿ ಇವರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ನೋಟರಿ ಹುದ್ದೆಯನ್ನು ತಮ್ಮ ದಂಧೆಯನ್ನಾಗಿಸಿಕೊಂಡಿದ್ದಾರೆಂದೂ, ಇಂತಹ ನೋಟರಿಗಳು ಸಮಾಜಕ್ಕೆ ಕೆಡಕುಂಟು ಮಾಡುತ್ತಾರೆಂದು ಹಾಗೂ ನೋಟರಿಯವರು ಕರ್ತವ್ಯಲೋಪ ಎಸಗಿದ್ದಾರೆಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 165 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ : 23ನೇ ಆಗಸ್ಟ್, 2013**

ಶ್ರೀ ಹರೀಂದ್ರ ವಾಸುದೇವ ಭಟ್, ನೋಟರಿ, ಗದಗ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದು ರುಜುವಾತಾದ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12)(ಬಿ) (1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ಶಾಶ್ವತವಾಗಿ ಇವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ಲಕ್ಷ್ಮೀನರಸಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

P.R. 1046
SC - 15

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೋಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ.ಮೂ. ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 4 ಪಿಸಿಇ 2012, ದಿನಾಂಕ : 09–03–2012.
2. ದಿನಾಂಕ : 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೋಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ : 12–09–2013.

**ಪ್ರಸ್ತಾವನೆ :**

ದಿನಾಂಕ : 02–03–2012 ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರ ಸರ್ಕಾರದ ಪರವಾಗಿ ದಿನಾಂಕ : 05–08–2013, 06–08–2013, 07–08–2013, 12–08–2013, 13–08–2013, 14–08–2013, 19–08–2013, 20–08–2013, 21–08–2013, 26–08–2013, 27–08–2013 & 28–08–2013,

12 ಮಹತ್ವದ ದಿನಗಳು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ರೂ. 1,20,000/– (ಒಂದು ಲಕ್ಷದ ಇಪ್ಪತ್ತು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ : 24–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ ರೂ. |
|---|---|---|
| 1. | Effective hearing (12 days)dated, 05-08-2013, 06-08-2013, 07-08-2013, 12-08-2013, 13-08-2013, 14-08-2013, 19-08-2013, 20-08-2013, 21-08-2013, 26-08-2013, 27-08-2013 & 28-08-2013 @ Rs. 10,000-00 per day | 1,20,000–00 |
| | ಒಟ್ಟು ಮೊತ್ತ (ಒಂದು ಲಕ್ಷದ ಇಪ್ಪತ್ತು ಸಾವಿರಗಳು ಮಾತ್ರ) | 1,20,000–00 |

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2070–00–105–0–02–059 ವಿಶೇಷ ತನಿಖಾ ಆಯೋಗಗಳು" ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ : 27–01–2012 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋವಿಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

**P.R. 1047**
**SC - 50**

## ಒಳಾಡಳಿತ ಸಚಿವಾಲಯ

**ಸುತ್ತೋಲೆ**

**ಸಂಖ್ಯೆ : ಒಇ 35 ಪಿಸಿಬಿ 2013, ಬೆಂಗಳೂರು, ದಿನಾಂಕ : 16–09–2013.**

ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು–2011 ರ ಕಲಂ 2, 3, ಮತ್ತು 4 ಪ್ರಕಾರ ಕರ್ನಾಟಕ ರಾಜ್ಯದಲ್ಲಿ ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನು ಒಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲ ಹಾಗೂ ಇತರೆ ಯಾವುದೇ ಹೆಸರಿನಲ್ಲಿ ಮಾರುಕಟ್ಟೆಯಲ್ಲಿ ಲಭ್ಯವಿರುವ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ತಯಾರಿಕೆ, ಸಂಗ್ರಹಣೆ, ಮಾರಾಟ ಹಾಗೂ ವಿತರಣೆಯನ್ನು ಸಾರ್ವಜನಿಕರ ಆರೋಗ್ಯದ ಹಿತ ದೃಷ್ಟಿಯಿಂದ ದಿನಾಂಕ : 30–05–2013 ರಿಂದ ಜಾರಿಗೆ ಬರುವಂತೆ ಸಂಪೂರ್ಣವಾಗಿ ನಿಷೇಧಿಸಿ ರಾಜ್ಯ ಆಹಾರ ಸಂರಕ್ಷತಾ ಆಯುಕ್ತರು ಮತ್ತು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ದಿನಾಂಕ : 30–05–2011 ರಂದು ಅಧಿಸೂಚನೆ ಹೊರಡಿಸಿರುತ್ತಾರೆ.

ಸದರಿ ಗುಟ್ಕಾ ಮತ್ತು ಪಾನ್ ಮಸಾಲ ನಿಷೇಧದ ಆದೇಶವನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು ಸೇರಿದಂತೆ ಒಟ್ಟು 11 ಸದಸ್ಯರನ್ನೊಳಗೊಂಡ 'ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿ' ಯನ್ನು ಸರ್ಕಾರದ ಆದೇಶ ಸಂಖ್ಯೆ : ಆಕುಕ 156 ಸಿಜಿಇ 2012, ದಿನಾಂಕ : 04–07–2013 ರ ರೀತ್ಯಾ ರಚಿಸಿ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಆರೋಗ್ಯ 1 ಮತ್ತು 2) ರವರು ಆದೇಶ ಹೊರಡಿಸಿರುತ್ತಾರೆ.

ಈಗಾಗಲೇ COTPA-2003ರ ಕಾಯ್ದೆಯನ್ನು ರಾಜ್ಯದ ಎಲ್ಲ ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಮುತುವರ್ಜಿ ವಹಿಸಿ ಉತ್ಸಾಹದಿಂದ ಜಾರಿ ತರುತ್ತಿರುವುದನ್ನು ಸರ್ಕಾರ ಶ್ಲಾಘಿಸುತ್ತದೆ. ಅದೇ ರೀತಿ ಗುಟ್ಕಾ ನಿಷೇಧ ಕಾಯ್ದೆಯನ್ನು ಸಹ ಕೂಡಲೇ ಜಾರಿಗೊಳಿಸಿ ಪ್ರತಿ ಮಾಹೆ ನಡೆಯುವ ಮಾಸಿಕ ಅಪರಾಧ ಸಭೆಯಲ್ಲಿ ಇದನ್ನು ಸಹ ಪರಿಶೀಲಿಸುವುದು ಹಾಗೂ COTPA-2003ರ ಅಂಕಿ ಅಂಶಗಳಂತೆಯೇ ಗುಟ್ಕಾ ನಿಷೇಧ ಕಾಯ್ದೆಯಡಿ ದಾಖಲಾದ ಪ್ರಕರಣಗಳ ಅಂಕಿ ಅಂಶಗಳನ್ನು ಸಹ ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ನಗರಾಭಿವೃದ್ಧಿ ಇಲಾಖೆ ಮತ್ತು ರಾಜ್ಯ ಅಪರಾಧ ದಾಖಲಾತಿ ವಿಭಾಗ, ಬೆಂಗಳೂರು ರವರಿಗೆ ನಿಗದಿತ ನಮೂನೆಯಲ್ಲಿ ಪ್ರತಿ ಮಾಹೆಯೂ ತಪ್ಪದೇ ಕಳುಹಿಸಲು ಈ ಮೂಲಕ ಸೂಚಿಸಿದೆ.

ಒಳಾಡಳಿತ ಇಲಾಖೆಗೆ ಮಾಹಿತಿಯನ್ನು e-mail ಮೂಲಕ also-home@karnataka.gov.in ವಿಳಾಸಕ್ಕೆ ಪ್ರತಿ ತಿಂಗಳು ಕಳುಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಚಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಅಪರಾಧಗಳು).

**PR. 1057**
**SC-100**

## HOME SECRETARIAT

**Sub** : Victim Compensation Scheme, 2011-revision of quantum of compensation.

**READ :** Notification No. HD 1 PCB 2011, dated : 22-02-2012.

**PREAMBLE :**

Government vide in the Notification read above have formulated a scheme in co-ordination with the Government of India for providing compensation to the victims or his/her dependents who have suffered loss or injury as a result of the crime and who require rehabilitation. In the schedule of the said Notification the Government have quantified the following rate of compensation to the victims.

| Sl. No. | Particulars of Loss or Injury due to crime | Maximum limit of quantum of Compensation |
|---|---|---|
| 1. | Loss of Life | Rs. 2.00 lacs. |
| 2. | Loss of any limb or part of body resulting 80% or above handicap | Rs. 1.00 lac |
| 3. | Loss of any limb or part of body resulting 40% & below 80% handicap | Rs. 50,000/- |
| 4. | Rape of Minor | Rs. 50,000/- |
| 5. | Rape | Rs. 40,000/- |
| 6. | Rehabiliation necessitated due to damage to house, vehicle etc. | Rs. 20,000/- |
| 7. | Loss of any limb or part of body resulting below 40% handicap | Rs. 20,000/- |
| 8. | Grievous injuries other than the injuries mentioned above | Rs. 10,000/- |
| 9. | Women and Child victims in cases like human trafficking, who themselves or their dependents have suffered separation, dislocation and disturbance | Rs. 10,000/- |

Now, Government have felt that there is a need to revise the nature of injuries and quantum of compensation provided thereon. Hence, this order.

### GOVERNMENT ORDER NO. HD 1 PCB 2011, Bangalore, dated : 19-09-2013.

Government is pleased to substitute the schedule mentioned in the Notification dated 22-02-2012 read above, with the following modified schedule.

**SCHEDULE**

| Sl. No. | Particulars of Loss or Injury due to crime | Compensation to be paid |
|---|---|---|
| 1. | Loss of Life | |
| | a) 40 Years of age or below | Rs. 3.00 lacs to the next of kin |
| | b) 40 Years to 60 years | Rs. 2.00 lacs to the next of kin |
| | c) 60 years and above | Rs. 1.00 lac to the next of kin |
| | **Note :** In case of death of a victim, expenses incurred for actual medical treatment, before death, upto a maximum of Rs. 25,000/- and a maximum of Rs. 20,000/- may be given as funeral expenses, to the next kin of the victim in case of victim's death | |
| 2. | Loss of any limb or part of body resulting 80% or above handicap due to any crime including Acid Attack | Rs. 3.00 lacs |
| 3. | Loss of any limb or part of body resulting 40% & below 80% handicap due to any crime including Acid Attack | Rs. 2.00 lacs |
| 4. | Loss of any limb or part of body resulting below 40% handicap due to any crime including Acid Attack | Rs. 1.00 lac |
| 5. | Rape of Minor | Rs. 3.00 lacs |
| 6. | Rape other than minor | Rs. 1.5 lacs |
| 7. | (a) Rehabiliation necessitated due to damage to house etc. 80% or more | Rs. 50,000/- |
| | (b) Rehabiliation necessitated due to damage to house etc. less than 80% | Rs. 25,000/- |
| 8. | Grievous injuries other than the injuries mentioned above | Rs. 20,000/- |
| 9. | Women and Child victims in cases like human trafficking, who themselves or their dependents have suffered separation, dislocation and distrurbance | Rs. 1.00 lac |

The above revised compensation shall come into immediate effect.

The other conditions prescribed in the victim compensation scheme, 2011 shall continue to be in effect.

By Order and in the name of the Governor of Karnataka

**S. CHANDRAPPA**

Under Secretary to Government,

Home Department (Crimes).

**P.R. 1059**

**SC-200**

## ಒಳಾಡಳಿತ ಸಚಿವಾಲಯ

**ವಿಷಯ :** ರಾಜ್ಯದಲ್ಲಿನ 54 ಶೀಘ್ರಗತಿ ನ್ಯಾಯಾಲಯಗಳನ್ನು ದಿನಾಂಕ : 01–04–2013 ರಿಂದ ದಿನಾಂಕ : 30–06–2013 ರವರೆಗೆ ಮುಂದುವರೆಸಿದ್ದು, ಈ ಅವಧಿಯಲ್ಲಿ ತ್ವರಿತಗತಿ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸಿದ ವಿಶೇಷ ಸರ್ಕಾರಿ ಅಭಿಯೋಜಕರುಗಳಿಗೆ ವೇತನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಲಾ 112 ಎಲ್‌ಸಿಇ 2012, ದಿನಾಂಕ : 28–12–2012.
2. ಸರ್ಕಾರದ ಆದೇಶ ಸಂಖ್ಯೆ : ಲಾ 112 ಎಲ್‌ಸಿಇ 2012, ದಿನಾಂಕ : 28–03–2013.
3. ಸರ್ಕಾರದ ಆದೇಶ ಸಂಖ್ಯೆ : ಒಇ 245 ಪಿಪಿಇ 2013, ದಿನಾಂಕ : 13–08–2013.
4. ಅಭಿಯೋಗ ನಿರ್ದೇಶಕರು ಇವರ ಪತ್ರ ಸಂ. ಡಿಪಿಎನ್/ಸಿಶಾ/1/311/2012–13, ದಿನಾಂಕ : 17–06–2013 ಮತ್ತು 18–06–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿನ 54 ಶೀಘ್ರಗತಿ ನ್ಯಾಯಾಲಯಗಳನ್ನು ದಿನಾಂಕ : 01–04–2013 ರಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿನ 54 ಶೀಘ್ರಗತಿ ನ್ಯಾಯಾಲಯಗಳನ್ನು ದಿನಾಂಕ : 01–04–2013 ರಿಂದ ದಿನಾಂಕ : 30–06–2013 ರವರೆಗೆ (3 ತಿಂಗಳು) ಸಿಬ್ಬಂದಿಗಳೊಂದಿಗೆ ಮುಂದುವರೆಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿನ 54 ಶೀಘ್ರಗತಿ ನ್ಯಾಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿಶೇಷ ಸರ್ಕಾರಿ ಅಭಿಯೋಜಕರ ಸೇವಾ ಅವಧಿಯನ್ನು ದಿನಾಂಕ : 01–04–2013 ರಿಂದ 30–06–2013 ರವರೆಗೆ ಮುಂದುವರೆಸಿ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿನ ಪತ್ರಗಳಲ್ಲಿ ನಿರ್ದೇಶಕರು ಅಭಿಯೋಗ ಇವರು ರಾಜ್ಯದಲ್ಲಿನ ತ್ವರಿತಗತಿ ನ್ಯಾಯಾಲಯಗಳಲ್ಲಿ ದಿನಾಂಕ : 01–04–2013 ರ ನಂತರ ಮುಕ್ತಾಯಗೊಂಡ ನ್ಯಾಯಾಲಯಗಳಲ್ಲಿ ದಿನಾಂಕ 01–04–2013 ರಿಂದ 30–06–2013 ರವರೆಗೆ ಕೆಲಸ ನಿರ್ವಹಿಸಿರುವಂತಹ ವಿಶೇಷ ಸರ್ಕಾರಿ ಅಭಿಯೋಜಕರುಗಳಿಗೆ ಅವರು ಕೆಲಸ ನಿರ್ವಹಿಸಿದ ಅವಧಿಗೆ ಮಾತ್ರ ವೇತನವನ್ನು ನೀಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಒಇ 136 ಪಿಪಿಇ 2013, ಬೆಂಗಳೂರು, ದಿನಾಂಕ : 28ನೇ ಸೆಪ್ಟೆಂಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶೀಘ್ರಗತಿ ನ್ಯಾಯಾಲಯಗಳಲ್ಲಿ ದಿನಾಂಕ : 01–04–2013 ರಿಂದ 30–06–2013 ರವರೆಗೆ ಮುಂದುವರೆದ ಸೇವಾವಧಿಯಲ್ಲಿ ಕಾರ್ಯ ನಿರ್ವಹಿಸಿದಂತಹ ವಿಶೇಷ ಸರ್ಕಾರಿ ಅಭಿಯೋಜಕರುಗಳಿಗೆ ವೇತನವನ್ನು ನೀಡಲು ಸರ್ಕಾರವು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

PR. 1063

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ನೀಡುವ ವಾರ್ಷಿಕ ವಿದ್ಯಾರ್ಥಿ ವೇತನ ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಕಇ 122 ಸಮನ್ವಯ 2011, ದಿನಾಂಕ : 07–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸದ ಒಂದರಿಂದ ಹತ್ತನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಾರ್ಷಿಕ ವಿದ್ಯಾರ್ಥಿ ವೇತನವನ್ನು ಒಂದರಿಂದ ಐದನೇ ತರಗತಿಯವರೆಗೆ ಬಾಲಕ/ಬಾಲಕಿಯರಿಗೆ 75 ರೂ. ಗಳಿಂದ 250 ರೂ.ಗಳಿಗೆ, ಮತ್ತು ಆರರಿಂದ ಏಳನೇ ತರಗತಿಯವರೆಗೆ ಬಾಲಕರಿಗೆ 75 ರೂ.ಗಳಿಂದ 250 ರೂ.ಗಳಿಗೆ, ಬಾಲಕಿಯರಿಗೆ 350 ರೂ.ಗಳಿಗೆ ಹಾಗೂ ಎಂಟರಿಂದ ಹತ್ತನೇ ತರಗತಿಯವರೆಗೆ ಬಾಲಕರಿಗೆ 100 ರೂ. ಗಳಿಂದ 500 ರೂ.ಗಳಿಗೆ ಬಾಲಕಿಯರಿಗೆ 600 ರೂ.ಗಳಿಂದ 700 ರೂ.ಗಳಿಗೆ ಹೆಚ್ಚಿಸಲಾಗಿತ್ತು.

2013–14ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 245 ಈ ಕೆಳಗಿನಂತಿದೆ :–

ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಡೇಸ್ ಸ್ಕಾಲರ್‌ಶಿಪ್‌ನ್ನು ವಿದ್ಯಾರ್ಥಿಗಳಿಗೆ 150 ರೂ. ಮತ್ತು ವಿದ್ಯಾರ್ಥಿನಿಯರಿಗೆ 200 ರೂ.ಗಳಷ್ಟು ಹೆಚ್ಚಿಸಲಾಗುವುದು. (ಪ್ರಸ್ತುತ ಸದರಿ ದರಗಳು ಬಾಲಕರಿಗೆ ರೂ. 250/– ರಿಂದ ರೂ. 500/– ವರೆಗೆ ಮತ್ತು ಬಾಲಕಿಯರಿಗೆ ರೂ. 250/– ರಿಂದ ರೂ. 700/–ಇರುತ್ತದೆ)

ಸದರಿ ಘೋಷಣೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಕಇ 89 ಸಮನ್ವಯ 2013(1), ಬೆಂಗಳೂರು, ದಿನಾಂಕ : 04-09-2013**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಲ್ಲಿ ವಾಸಿಸದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಡೇಸ್ ಸ್ಕಾಲರ್‌ಶಿಪ್‌ನ್ನು 2013-14ನೇ ಸಾಲಿನಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಹೆಚ್ಚಿಸಲಾಗಿದೆ.

| ತರಗತಿ | ಬಾಲಕರು | | ಬಾಲಕಿಯರು | |
|---|---|---|---|---|
| | ಪ್ರಸ್ತುತ ದರ (ರೂ) | ಹೆಚ್ಚಿಸಲಾದ ದರ (ರೂ) | ಪ್ರಸ್ತುತ ದರ (ರೂ) | ಹೆಚ್ಚಿಸಲಾದ ದರ (ರೂ) |
| 1 ರಿಂದ 5 | 250.00 | 400.00 | 250.00 | 450.00 |
| 6 ರಿಂದ 7 | 250.00 | 400.00 | 350.00 | 550.00 |
| 8 ರಿಂದ 10 | 500.00 | 650.00 | 700.00 | 900.00 |

ಸರ್ಕಾರಿ ಆದೇಶ ಸಂಖ್ಯೆ : ಸಕಇ 122 ಸಮನ್ವಯ 2011, ದಿನಾಂಕ : 07-07-2011 ರಲ್ಲಿರುವ ಎಲ್ಲಾ ಇತರ ಷರತ್ತುಗಳನ್ನು ಯಥಾಸ್ಥಿತಿ ಪಾಲಿಸತಕ್ಕದ್ದು.

ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸಂಬಂಧಿಸಿದ ವೆಚ್ಚವನ್ನು ಕ್ರೋಢೀಕೃತ ಅನುದಾನದ ಲೆಕ್ಕಶೀರ್ಷಿಕೆ 2225-01-102-0-08 ರಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಆಇ 532 ವೆಚ್ಚ-3/2013, ದಿನಾಂಕ : 31-08-2013ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಮಾಜ ಕಲ್ಯಾಣ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಸಕಇ 89 ಸಮನ್ವಯ 2013 ಬೆಂಗಳೂರು, ದಿನಾಂಕ : 05-10-2013**

ಸರ್ಕಾರದ ಆದೇಶ ಸಂಖ್ಯೆ : ಸಕಇ 89 ಸಮನ್ವಯ 2013(1), ದಿನಾಂಕ : 04-09-2013ರ ಆದೇಶ ಭಾಗದಲ್ಲಿ "ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸಂಬಂಧಿಸಿದ ವೆಚ್ಚವನ್ನು ಕ್ರೋಢೀಕೃತ ಅನುದಾನದ ಲೆಕ್ಕಶೀರ್ಷಿಕೆ 2225-01-102-0-08 ರಡಿಯಲ್ಲಿ ಭರಿಸುವುದು" ಎಂಬುದರ ಬದಲಾಗಿ "ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಕ್ರೋಢೀಕೃತ ಅನುದಾನದ ಲೆಕ್ಕಶೀರ್ಷಿಕೆ 2225-01-102-0-08 ರಲ್ಲಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಕ್ರೋಢೀಕೃತ ಅನುದಾನದ ಲೆಕ್ಕಶೀರ್ಷಿಕೆ 2225-02-283-0-02 ರಡಿಯಲ್ಲಿ ಭರಿಸುವುದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**ವಿ. ರತ್ನಮ್ಮ**
**PR. 1064** ಸರ್ಕಾರದ ಅಧೀನ ಕಾರ್ಯದರ್ಶಿ-3,
**SC-500** ಸಮಾಜ ಕಲ್ಯಾಣ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ಮೀನುಗಾರಿಕಾ ದೋಣಿಗಳಿಗೆ ಸಾಧ್ಯತಾ ಪತ್ರ ನೀಡುವ ಅಧಿಕಾರವನ್ನು ಮೀನುಗಾರಿಕೆ ಉಪ ನಿರ್ದೇಶಕರಿಗೆ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ :** 4. ಆದೇಶ ಸಂಖ್ಯೆ : ಪಸಂಮೀ/73/ಮೀಇಇ/88, ದಿನಾಂಕ : 21-12-1988 ಮತ್ತು ಅದರ ಅನುಬಂಧ.
5. ಆದೇಶ ಸಂಖ್ಯೆ : ಪಸಂಮೀ/236/ಮೀಇಇ/2002, ದಿನಾಂಕ : 06-12-2002.
6. ಆದೇಶ ಸಂಖ್ಯೆ : ಪಸಂಮೀ/113/ಮೀಇಯೋ/2009, ದಿನಾಂಕ : 27-06-2009.
7. ಪತ್ರ ಸಂಖ್ಯೆ : ಎಂಇಎಫ್.24/2013-14, ದಿನಾಂಕ : 12-08-2013 ಮತ್ತು 20-08-2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಿರ್ಮಿಸಲಾಗುವ ಯಾಂತ್ರೀಕ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಸಂಬಂಧ ಎರಡು ಜಿಲ್ಲೆಗಳಿಗೆ ಪ್ರತ್ಯೇಕವಾದ ಸಮಿತಿಗಳನ್ನು ರಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ, ದಕ್ಷಿಣ ಕನ್ನಡ ಜಿಲ್ಲೆ ಮತ್ತು ಉಡುಪಿ ಜಿಲ್ಲೆಗಳಲ್ಲಿ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಸಂಬಂಧ ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಮತ್ತು ಹೊನ್ನಾವರ ಬಂದರು ಯೋಜನೆ ಕಛೇರಿ, ಮಲ್ಪೆ, ಉಡುಪಿ ಇವರ ಅಧ್ಯಕ್ಷತೆಯಲ್ಲಿ ಎರಡೂ ಜಿಲ್ಲೆಗಳಿಗೆ ಪ್ರತ್ಯೇಕ ಸಮಿತಿಗಳನ್ನು ರಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ, ಉತ್ತರ ಕನ್ನಡ ಜಿಲ್ಲೆಯಲ್ಲಿ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಅನುವಾಗುವಂತೆ ಸಾಧ್ಯತಾ ಪ್ರಮಾಣ ಪತ್ರಗಳನ್ನು ನೀಡಲು ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಮತ್ತು ಹೊನ್ನಾವರ ಮೀನುಗಾರಿಕೆ ಬಂದರು ಯೋಜನೆ, ಮಲ್ಪೆ, ಉಡುಪಿ ಇವರ ಅಧ್ಯಕ್ಷತೆಯಲ್ಲಿ ಸಮಿತಿ ಒಂದನ್ನು ರಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ : 12–08–2013ರ ಪತ್ರದಲ್ಲಿ ನಿರ್ದೇಶಕರು, ಮೀನುಗಾರಿಕೆ ಇಲಾಖೆ ಇವರು ಮೀನುಗಾರಿಕೆ ಇಲಾಖೆಯಲ್ಲಿ ಆಡಳಿತವನ್ನು ಚುರುಕುಗೊಳಿಸಲು ಹಾಗೂ ಕಾರ್ಯದಕ್ಷತೆಯನ್ನು ಹೆಚ್ಚಿಸುವ ಉದ್ದೇಶದಿಂದ ಮೀನುಗಾರಿಕಾ ದೋಣಿಗಳಿಗೆ ಸಾಧ್ಯತಾ ಪತ್ರ ನೀಡುವ ಅಧಿಕಾರವನ್ನು ಈಗಾಗಲೇ ರಾಜ್ಯ ಸರ್ಕಾರವು ಯೋಜನಾ ಸಮನ್ವಯಾಧಿಕಾರಿ, ಮಲ್ಪೆರವರ ಅಧ್ಯಕ್ಷತೆಯಲ್ಲಿ 3 ಪ್ರತ್ಯೇಕ ಜಿಲ್ಲಾ ಸಾಧ್ಯತಾ ಪತ್ರಗಳನ್ನು ನೀಡುವ ಸಮಿತಿಗಳನ್ನು ರಚಿಸಿದ್ದು, ಸದರಿ ಸಮಿತಿಯಲ್ಲಿ ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಮತ್ತು ಆಯಾ ಜಿಲ್ಲೆಯ ಫೆಡರೇಶನ್‌ನ ಆಡಳಿತ ನಿರ್ದೇಶಕರಲ್ಲದೆ ಜಿಲ್ಲಾ ಲೀಡ್ ಬ್ಯಾಂಕ್ ಮ್ಯಾನೇಜರುಗಳು ಸದಸ್ಯರಾಗಿದ್ದು, ಇವು ಸ್ಥಳೀಯ ಸಂಸ್ಥೆಗಳಾಗಿರುವುದರಿಂದ, ಅವುಗಳನ್ನೇ ಮುಂದುವರೆಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ. ಮುಂದುವರೆದು, ದಿನಾಂಕ : 20–08–2013ರ ಪತ್ರದಲ್ಲಿ ಮೀನುಗಾರಿಕಾ ದೋಣಿಗಳಿಗೆ ಸಾಧ್ಯತಾ ಪ್ರಮಾಣ ಪತ್ರ ನೀಡುವ ಅಧಿಕಾರವನ್ನು ಮೀನುಗಾರಿಕೆ ಉಪ ನಿರ್ದೇಶಕರಿಗೆ ಪ್ರತ್ಯಾಯೋಜಿಸುವ ಸಂಬಂಧ ಹೊಸ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 135 ಮೀಇಸೇ 2013, ಬೆಂಗಳೂರು, ದಿನಾಂಕ : 21–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಉಡುಪಿ ಜಿಲ್ಲೆ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಸಂಬಂಧ ಮೂರು (03) ಜಿಲ್ಲೆಗಳಿಗೆ ಈ ಕೆಳಕಂಡಂತೆ ಪ್ರತ್ಯೇಕ ಸಮಿತಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿ ಆದೇಶಿಸಿದೆ.

**ದಕ್ಷಿಣ ಕನ್ನಡ ಜಿಲ್ಲೆ**

| | | |
|---|---|---|
| 1. | ಮೀನುಗಾರಿಕೆ ಉಪ ನಿರ್ದೇಶಕರು, ಮಂಗಳೂರು | ಅಧ್ಯಕ್ಷರು |
| 2. | ಡಿಸ್ಟ್ರಿಕ್ಟ್ ಲೀಡ್ ಬ್ಯಾಂಕ್ ಮ್ಯಾನೇಜರ್, ಮಂಗಳೂರು | ಸದಸ್ಯರು |
| 3. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), (ದೋಣಿ ಮತ್ತು ಸಲಕರಣೆ), ಮಂಗಳೂರು | ಸದಸ್ಯರು |
| 4. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇಣಿ–2), ಮಂಗಳೂರು | ಸದಸ್ಯರು |
| 5. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), ಮಂಗಳೂರು | ಸದಸ್ಯ–ಕಾರ್ಯದರ್ಶಿ |

**ಉಡುಪಿ ಜಿಲ್ಲೆ**

| | | |
|---|---|---|
| 1. | ಮೀನುಗಾರಿಕೆ ಉಪ ನಿರ್ದೇಶಕರು, ಮಂಗಳೂರು | ಅಧ್ಯಕ್ಷರು |
| 2. | ಡಿಸ್ಟ್ರಿಕ್ಟ್ ಲೀಡ್ ಬ್ಯಾಂಕ್ ಮ್ಯಾನೇಜರ್, ಉಡುಪಿ | ಸದಸ್ಯರು |
| 3. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1) (ತಾಂತ್ರಿಕ), ಉಡುಪಿ | ಸದಸ್ಯರು |
| 4. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇಣಿ–2), ಉಡುಪಿ | ಸದಸ್ಯರು |
| 5. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕುಂದಾಪುರ | ಸದಸ್ಯರು |
| 6. | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಉಡುಪಿ | ಸದಸ್ಯ–ಕಾರ್ಯದರ್ಶಿ |

**ಉತ್ತರ ಕನ್ನಡ ಜಿಲ್ಲೆ**

| | | |
|---|---|---|
| 1. | ಮೀನುಗಾರಿಕೆ ಉಪ ನಿರ್ದೇಶಕರು, ಕಾರವಾರ | ಅಧ್ಯಕ್ಷರು |
| 2. | ಡಿಸ್ಟ್ರಿಕ್ಟ್ ಲೀಡ್ ಬ್ಯಾಂಕ್ ಮ್ಯಾನೇಜರ್, ಉತ್ತರ ಕನ್ನಡ | ಸದಸ್ಯರು |
| 3. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), (ದೋಣಿ ಮತ್ತು ಸಲಕರಣೆ), ಕಾರವಾರ | ಸದಸ್ಯರು |
| 4. | ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇಣಿ–2), ಕಾರವಾರ | ಸದಸ್ಯರು |
| 5. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಅಂಕೋಲಾ | ಸದಸ್ಯರು |
| 6. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಕುಮಟಾ | ಸದಸ್ಯರು |
| 7. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಹೊನ್ನಾವರ | ಸದಸ್ಯರು |

| | | |
|---|---|---|
| 8. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಭಟ್ಕಳ | ಸದಸ್ಯರು |
| 9. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–1), ಕಾರವಾರ | ಸದಸ್ಯ–ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಜಯಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**PR. 1031**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಪಸಂಮೀ 37 ಮೀಇಯೋ 2013, ಬೆಂಗಳೂರು, ದಿನಾಂಕ : 19–09–2013.**

ವಿವಿಧ ಜಾತಿಯ ಬಲಿತ ಬಿತ್ತನೆ ಮೀನುಮರಿಗಳ ಮಾರಾಟ ದರವನ್ನು (ಸಾಗಾಣಿಕೆ ವೆಚ್ಚ ಹೊರತುಪಡಿಸಿ) ಈ ಕೆಳಕಂಡಂತೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಗದಿಪಡಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಬಲಿತ ಬಿತ್ತನೆ ಮೀನುಮರಿ ತಳಿಗಳು | ಪರಿಷ್ಕೃತ ದರ 1000 ಸಂಖ್ಯೆ ಮೀನುಮರಿಗಳಿಗೆ (ರೂ. ಗಳಲ್ಲಿ) |
|---|---|---|
| 1. | ಕಟ್ಲಾ | 800.00 |
| 2. | ರೋಹು | 800.00 |
| 3. | ಮೃಗಾಲ್ | 800.00 |
| 4. | ಸಾಮಾನ್ಯಗೆಂಡೆ | 800.00 |
| 5. | ಹುಲ್ಲುಗೆಂಡೆ | 1000.00 |
| 6. | ಬೆಳ್ಳಿಗೆಂಡೆ | 1000.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಜಯಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**PR. 1032**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬೆಂಗಳೂರು ಕುಮಾರ ಕೃಪ ರಸ್ತೆಯಲ್ಲಿರುವ ಕುಮಾರ ಕೃಪ ಅತಿಥಿಗೃಹ ಆವರಣದಲ್ಲಿ ಹೊಸ ಅತಿಥಿಗೃಹ ಒಂದನೇ ಹಂತದ ಕಾಮಗಾರಿಯ ಅಂದಾಜು ಮೊತ್ತ ರೂ. 3965.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**

1. ಆದೇಶ ಸಂಖ್ಯೆ : ಲೋಇ 148 ಬಿಎಂಎಸ್ 2010, ದಿನಾಂಕ : 17–06–2010.
2. ಮುಖ್ಯ ಇಂಜಿನಿಯರ್, ಸಂಕ (ದ), ಬೆಂಗಳೂರು, ಇವರ ಪತ್ರ ಸಂ. ಮುಅ:ಸಂಕದ:ಸಇ–1:2011–12, ದಿನಾಂಕ : 30–05–2012, 12–06–2012 ಮತ್ತು 12–02–2013.

**ಪ್ರಸ್ತಾವನೆ :**

ಬೆಂಗಳೂರು ನಗರದಲ್ಲಿರುವ ಕುಮಾರ ಕೃಪ ಅತಿಥಿ ಗೃಹದ ಆವರಣದಲ್ಲಿ ಖಾಲಿ ಇರುವ ನಿವೇಶನದಲ್ಲಿ ಹೊಸ 10 ಮಹಡಿಗಳ ಕಟ್ಟಡವನ್ನು 202 ಕೊಠಡಿಗಳಿಗೆ ಅವಕಾಶವಿರುವಂತೆ (ಅವುಗಳ ಪೈಕಿ ಅತಿ ಗಣ್ಯ ವ್ಯಕ್ತಿಗಳ ವಾಸ್ತವ್ಯಕ್ಕಾಗಿ 40 ಕೊಠಡಿಗಳು) ರೂ. 6000.00 ಲಕ್ಷಗಳ ಅಂದಾಜಿನಲ್ಲಿ ನಿರ್ಮಾಣ ಮಾಡಲು ಕೆಲವೊಂದು ಷರತ್ತು ವಿಧಿಸಿ ಮೇಲೆ 1ರಲ್ಲಿ ಓದಲಾದ ದಿನಾಂಕ : 17–06–2010ರ ಆದೇಶದಲ್ಲಿ ಆದೇಶಿಸಲಾಗಿತ್ತು. ಆದರೆ ಪ್ರಸ್ತುತ ಅಂದಾಜು ಮೊತ್ತ ಜಾಸ್ತಿ ಆಗಿರುವುದರಿಂದ ಮುಂದಿನ ಕ್ರಮ ಕೈಗೊಂಡಿರುವುದಿಲ್ಲ.

2. ಬೆಂಗಳೂರು ಕುಮಾರ ಕೃಪ ಅತಿಥಿಗೃಹ ಆವರಣದಲ್ಲಿ ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ನೀಡಿರುವ ನೀಲಿ ನಕ್ಷೆಗಳಂತೆ ಹಾಲಿ ಕುಮಾರ ಕೃಪ ಅತಿಥಿಗೃಹ ಕಟ್ಟಡದ ವಾಸ್ತುಶಿಲ್ಪಕ್ಕೆ ಹೊಂದಾಣಿಕೆ ಇರುವಂತೆ 9 ಅಂತಸ್ತಿನ (ಬೇಸ್‌ಮೆಂಟ್, ನೆಲಮಹಡಿ ಮತ್ತು 7 ಮೇಲ್ಮಹಡಿ) ಹೊಸ ಅತಿಥಿಗೃಹ ಕಟ್ಟಡ 11 ನಿರ್ಮಾಣ ಮಾಡುವ ಕಾಮಗಾರಿಯ ಅಂದಾಜು ಮೊತ್ತ ರೂ. 7,200.00 ಲಕ್ಷಗಳಿಗೆ ಲೆಕ್ಕಶೀರ್ಷಿಕೆ : 4059ರ ಅಡಿಯಲ್ಲಿ 2012–13ನೇ ಸಾಲಿನಲ್ಲಿ ಅನುದಾನದೊಂದಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ 2ರಲ್ಲಿ ಓದಲಾದ ದಿನಾಂಕ : 30–05–2012ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

3. ಅದರಂತೆ ಕರಡು ಸಚಿವ ಸಂಪುಟ ಟಿಪ್ಪಣಿ ಮಂಡಿಸಲಾಗಿತ್ತು. ದಿನಾಂಕ : 21–09–2012 ರಂದು ನಡೆದ ಸಚಿವ ಸಂಪುಟದ ಕಾರ್ಯಸೂಚಿಯ ಕ್ರ. ಸಂ. 21 ರಲ್ಲಿ ಚರ್ಚಿಸಿ ವಿಷಯವನ್ನು ಅನಿರ್ಧಿಷ್ಟ ಕಾಲದವರೆಗೆ ಮುಂದೂಡಲಾಗಿರುತ್ತದೆ.

4. ಈ ಹಿನ್ನೆಲೆಯಲ್ಲಿ ಕುಮಾರ ಕೃಪ ಅತಿಥಿಗೃಹ ಹೆಚ್ಚುವರಿ ಕೊಠಡಿ ನಿರ್ಮಾಣಕ್ಕೆ 2012–13ನೇ ಸಾಲಿನಲ್ಲಿ ಮುಂದುವರೆದ ಕಾಮಗಾರಿಗಳ ಪಟ್ಟಿಯಲ್ಲಿ ಮೀಸಲಿರಿಸಿದ್ದ ಲೆಕ್ಕಶೀರ್ಷಿಕೆ : 4059ರ ಅಡಿಯಲ್ಲಿ ರೂ. 1788.96 ಲಕ್ಷಗಳ ಅನುದಾನವನ್ನು ಹಿಂಪಡೆದು ಬದಲಿ ಕಾಮಗಾರಿಗಳಿಗೆ ಅನುಮೋದನೆ ನೀಡಲಾಗಿರುತ್ತದೆ. ಪ್ರಸ್ತುತ ಈ ಕಾಮಗಾರಿಗೆ ಯಾವುದೇ ಅನುದಾನ ಲಭ್ಯವಿರುವುದಿಲ್ಲ.

5. ದಿನಾಂಕ : 05–01–2013ರಂದು ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಇವರು ಸಭೆ ನಡೆಸಿ ಬೆಂಗಳೂರು ಕುಮಾರ ಕೃಪ ಅತಿಥಿ ಗೃಹ ಆವರಣದಲ್ಲಿ ಹೊಸ ಅತಿಥಿ ಗೃಹ ಕಟ್ಟಡವನ್ನು 2 ಹಂತಗಳಲ್ಲಿ ನಿರ್ಮಾಣ ಮಾಡುವ ಬಗ್ಗೆ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಇವರಿಗೆ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಿರುತ್ತಾರೆ.

6. ಅದರಂತೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ಒಂದನೇ ಹಂತದಲ್ಲಿ ಕುಮಾರ ಕೃಪ ಅತಿಥಿಗೃಹದ ಪಶ್ಚಿಮ ಭಾಗದಲ್ಲಿ ಸುಮಾರು 1550.00 ಚ.ಮೀ. ವಿಸ್ತೀರ್ಣ ಜಾಗದಲ್ಲಿ ತಳಮಹಡಿ, ನೆಲಮಹಡಿ ಮತ್ತು 7 ಮೇಲ್ಮಹಡಿಗಳ ಒಟ್ಟು ವಿಸ್ತೀರ್ಣ 9842.00 ಚ.ಮೀ. ನಲ್ಲಿ 75 ಅತಿಥಿ ಗೃಹ ಕೊಠಡಿಗಳು ಮತ್ತು 24 ವಿ.ವಿ.ಐ.ಪಿ. ಅತಿಥಿ ಗೃಹ ಕೊಠಡಿಗಳನ್ನು ನಿರ್ಮಾಣ ಮಾಡಬಹುದಾಗಿದ್ದು, ಈ ವಿಸ್ತೀರ್ಣದಲ್ಲಿ ಪೋರ್ಟಿಕೋ, ಡೈನಿಂಗ್, ಅಡುಗೆ ಕೋಣೆ ಮತ್ತು ಉಗ್ರಾಣಗಳು ಸೇರಿರುತ್ತವೆ. ಈ ರೀತಿ ನಿರ್ಮಾಣ ಮಾಡುವುದರಿಂದ 1ನೇ ಹಂತದ ಎಲ್ಲಾ ಕೊಠಡಿಗಳನ್ನು ಅತಿಥಿ ವಾಸ್ತವ್ಯಕ್ಕೆ ಯಾವುದೇ ತೊಂದರೆ ಇಲ್ಲದೇ ಉಪಯೋಗಿಸಬಹುದಾಗಿದ್ದು, ಈಗಾಗಲೇ ಸಲ್ಲಿಸಿರುವ ಮೂಲ ಅಂದಾಜಿನಂತೆ ಅದರಲ್ಲಿ ರೂ. 3965.00 ಲಕ್ಷಗಳು ಬೇಕಾಗಿರುತ್ತದೆ ಎಂದು ಪ್ರಸ್ತಾಪಿಸಿರುತ್ತಾರೆ.

7. 2ನೇ ಹಂತದಲ್ಲಿ ಉತ್ತರ ಭಾಗವನ್ನು ನಿರ್ಮಾಣ ಮಾಡಲು ಯೋಜಿಸಿದ್ದು, ಸುಮಾರು 1225.00 ಚ.ಮೀ. ವಿಸ್ತೀರ್ಣದ ಜಾಗದಲ್ಲಿ ತಳಮಹಡಿ, ನೆಲಮಹಡಿ ಮತ್ತು 7 ಮೇಲ್ಮಹಡಿಗಳ ಒಟ್ಟು ವಿಸ್ತೀರ್ಣ 8030.00 ಚ.ಮೀ. ನಲ್ಲಿ 87 ಅತಿಥಿ ಗೃಹ ಕೊಠಡಿಗಳು ಮತ್ತು 15 ವಿ.ವಿ.ಐ.ಪಿ ಅತಿಥಿ ಗೃಹ ಕೊಠಡಿಗಳನ್ನು ನಿರ್ಮಾಣ ಮಾಡಬಹುದಾಗಿದ್ದು, ಈ ಕಾಮಗಾರಿಗೆ ಈಗಾಗಲೇ ಸಲ್ಲಿಸಲಾಗಿದ್ದ ಮೂಲ ಅಂದಾಜಿನಂತೆ ರೂ. 3235.00 ಲಕ್ಷಗಳು ಬೇಕಾಗಿರುತ್ತದೆ. ಈ ಮೊದಲು ಸಲ್ಲಿಸಿದ್ದ ರೂ. 7200.00 ಲಕ್ಷಗಳ ಮೂಲ ಅಂದಾಜಿನಲ್ಲಿ ರೂ. 3965.00 ಲಕ್ಷ ಮತ್ತು ರೂ. 3235.00 ಲಕ್ಷಗಳನ್ನು ಎರಡು ಹಂತದ ಕಾಮಗಾರಿಗಳಾಗಿ ಬೇರ್ಪಡಿಸಲಾಗಿದೆ.

8. ಪ್ರಸ್ತಾಪಿತ ಕಾಮಗಾರಿಗಳನ್ನು ಹಂತ ಹಂತವಾಗಿ ನಿರ್ಮಾಣ ಮಾಡಿದರೆ ಒಂದನೇ ಹಂತದ ಕಟ್ಟಡ ಸಂಪೂರ್ಣವಾಗಿ ಅತಿಥಿಗಳ ವಾಸ್ತವ್ಯಕ್ಕೆ ಯಾವುದೇ ಅಡಚಣೆ ಇಲ್ಲದೇ ನೀಡಬಹುದಾಗಿರುತ್ತದೆ. 2ನೇ ಹಂತದ ಜಾಗದಲ್ಲಿ ಹಾಲಿ ಇರುವ ವಸತಿ ಗೃಹಗಳನ್ನು 1ನೇ ಹಂತ ನಿರ್ಮಾಣ ಮಾಡಿದ ನಂತರ ಕೆಡವಬಹುದಾಗಿರುತ್ತದೆ. ಅಲ್ಲಿಯ ತನಕ ವಸತಿ ಗೃಹಗಳಲ್ಲಿ ವಸತಿದಾರರು ವಾಸ್ತವ್ಯ ಮುಂದುವರೆಸಬಹುದಾಗಿದೆಯೆಂದು ವರದಿಸುತ್ತಾ, ಒಂದನೇ ಹಂತದ ಕಟ್ಟಡ ಕಾಮಗಾರಿಯ ನಿರ್ಮಾಣದ ಅಂದಾಜು ಮೊತ್ತ ರೂ. 3965.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ : 4059–80–051–0–29–386–ಇಲಾಖಾ ಕಟ್ಟಡಗಳ ಯೋಜನೆಯಡಿಯಲ್ಲಿ ಒದಗಿಸಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ 2ರಲ್ಲಿ ಓದಲಾದ ದಿನಾಂಕ : 12–06–2012ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

9. ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಲೋಇ 277 ಬಿಎಂಎಸ್ 2012, ಬೆಂಗಳೂರು, ದಿನಾಂಕ : 19–06–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ಕುಮಾರ ಕೃಪ ರಸ್ತೆಯಲ್ಲಿರುವ ಕುಮಾರ ಕೃಪ ಅತಿಥಿಗೃಹ ಆವರಣದಲ್ಲಿ 2 ಹಂತಗಳ ಕಾಮಗಾರಿಯನ್ನು ಕೈಗೊಳ್ಳಲು ನಿರ್ಧರಿಸಿ, ಅವುಗಳಲ್ಲಿ 1ನೇ ಹಂತದ ಕಾಮಗಾರಿಯನ್ನು ಕುಮಾರ ಕೃಪ ವಸತಿಗೃಹದ ಪಶ್ಚಿಮ ಭಾಗದಲ್ಲಿ ಸುಮಾರು 1550.00 ಚ.ಮೀ. ವಿಸ್ತೀರ್ಣ ಜಾಗದಲ್ಲಿ ತಳಮಹಡಿ, ನೆಲಮಹಡಿ ಮತ್ತು 7 ಮೇಲ್ಮಹಡಿಗಳ ಒಟ್ಟು ವಿಸ್ತೀರ್ಣ 9842.00 ಚ.ಮೀ. ನಲ್ಲಿ 75 ಅತಿಥಿಗೃಹ ಕೊಠಡಿಗಳು ಮತ್ತು 24 ವಿ.ವಿ.ಐ.ಪಿ. ಕೊಠಡಿಗಳನ್ನು ನಿರ್ಮಾಣ ಮಾಡಲು ರೂ. 3965.00 ಲಕ್ಷ (ರೂಪಾಯಿ ಮೂರು ಸಾವಿರದ ಒಂಭೈನೂರ ಅರವತ್ತೈದು ಲಕ್ಷ ಮಾತ್ರ) ಗಳ ಅಂದಾಜು ಪಟ್ಟಿಯ ಕಾಮಗಾರಿಯನ್ನು 2013–14ನೇ ಸಾಲಿನ ಲೆಕ್ಕಶೀರ್ಷಿಕೆ : 4059 (ಯೋಜನೆ) ಅಡಿಯಲ್ಲಿ ಅಪೆಂಡಿಕ್ಸ್–ಇ ನಲ್ಲಿ ಸೇರಿಸುವ ಷರತ್ತುಗೊಳಪಡಿಸಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

**PR. 1033**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ** : ಚಿಕ್ಕಬಳ್ಳಾಪುರ ಪಟ್ಟಣದಲ್ಲಿ ಹೊಸದಾಗಿ ಕ.ರಾ.ರ.ಸಾ.ಸಂಸ್ಥೆಯ ಬಸ್ ನಿಲ್ದಾಣ ನಿರ್ಮಿಸಲು ಲೋಕೋಪಯೋಗಿ ಇಲಾಖೆಗೆ ಸೇರಿದ ಪ್ರವಾಸಿ ಮಂದಿರದ 33 ಗುಂಟೆ ಜಮೀನನ್ನು ಕ.ರಾ.ರ.ಸಾ.ಸಂಸ್ಥೆಗೆ ಹಸ್ತಾಂತರಿಸುವ ಕುರಿತು.

**ಓದಲಾಗಿದೆ :**

1. ಸಾರಿಗೆ ಇಲಾಖೆಯ ಅ.ಟಿ. ಸಂಖ್ಯೆ : ಸಾರಿಇ 361 ಸಾಸಂಇ 2008, ದಿನಾಂಕ : 05–10–2009.
2. ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಇವರ ಪತ್ರ ಸಂಖ್ಯೆ : ಪಿಎಸಿಆರ್ 13/2009–10, ದಿನಾಂಕ : 01–09–2009 ಹಾಗೂ ಎಲ್ಎನ್‌ಡಿಸಿಆರ್ : 156 : 2009–10, ದಿನಾಂಕ : 30–01–2010.
3. ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಇವರ ಪತ್ರ ಸಂಖ್ಯೆ : ಎಲ್ಎನ್‌ಡಿಸಿಆರ್:234:2009–10, ದಿನಾಂಕ : 28–12–2012 ಹಾಗೂ 17–09–2013.
4. ತೋಟಗಾರಿಕಾ ಇಲಾಖೆಯ ಆದೇಶ ಸಂಖ್ಯೆ : ತೋಇ 03 ರೇಯೋವಿ 2012, ದಿನಾಂಕ : 02–03–2012.
5. ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ವಿಭಾಗ, ಚಿಕ್ಕಬಳ್ಳಾಪುರ, ಇವರ ಪತ್ರ ಸಂಖ್ಯೆ : ಸಕಾಇ/ಲೋಇ/ಉವಿ/ಚಿಬಪು/ಐಬಿ/2011–12/318, ದಿನಾಂಕ : 17–07–2012.

**ಪ್ರಸ್ತಾವನೆ :**

ಮೇಲೆ 1ರಲ್ಲಿ ಓದಲಾದ ದಿನಾಂಕ : 05–10–2009ರ ಅನಧಿಕೃತ ಟಿಪ್ಪಣಿಯಲ್ಲಿ ಸಾರಿಗೆ ಇಲಾಖೆಯ ಚಿಕ್ಕಬಳ್ಳಾಪುರ ಪಟ್ಟಣದಲ್ಲಿರುವ ಲೋಕೋಪಯೋಗಿ ಇಲಾಖೆಯ ಪ್ರವಾಸಿ ಮಂದಿರದ ಆವರಣದಲ್ಲಿ ಇರುವ ಒಟ್ಟು 3 ಎಕರೆ 2 ಗುಂಟೆ ಜಮೀನನ್ನು ಹೊಸ ಬಸ್ ನಿಲ್ದಾಣ ನಿರ್ಮಾಣ ಮಾಡಲು ಕ.ರಾ.ರ.ಸಾ.ಸಂಸ್ಥೆಗೆ ಹಸ್ತಾಂತರಿಸಲು ಕೋರಿದ್ದರು.

ಮೇಲೆ 2ರಲ್ಲಿ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ, ಇವರ ಚಿಕ್ಕಬಳ್ಳಾಪುರ ನಗರದಲ್ಲಿರುವ ಪ್ರವಾಸಿ ಮಂದಿರದ ಜಾಗವನ್ನು ನೂತನ ಬಸ್ ನಿಲ್ದಾಣ ನಿರ್ಮಾಣ ಮಾಡಲು 03 ಎಕರೆ 02 ಗುಂಟೆ ಪ್ರದೇಶವನ್ನು ಕ.ರಾ.ರ.ಸಾ.ಸಂಸ್ಥೆಗೆ ಹಸ್ತಾಂತರಿಸಿದಲ್ಲಿ ಹೊಸದಾಗಿ ಪ್ರವಾಸಿ ಮಂದಿರ ನಿರ್ಮಾಣ ಮಾಡಲು ಸೂಕ್ತ ಬದಲಿ ಜಾಗವನ್ನು ನೀಡುವುದಾಗಿ ತಿಳಿಸಿದ್ದರು. ಈ ವಿಷಯದ ಬಗ್ಗೆ ಸರ್ಕಾರದ ಮಟ್ಟದಲ್ಲಿ ಸಾರಿಗೆ ಇಲಾಖೆ ಅಧಿಕಾರಿಗಳು, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ, ವ್ಯವಸ್ಥಾಪಕ ನಿರ್ದೇಶಕರು, ಕ.ರಾ.ರ.ಸಾ.ನಿಗಮ, ಬೆಂಗಳೂರು ಹಾಗೂ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳನ್ನೊಳಗೊಂಡಂತೆ ಅನೇಕ ಸಭೆಗಳನ್ನು ನಡೆಸಲಾಗಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ವರದಿಯನ್ನು ಸಲ್ಲಿಸಿ ಮೇಲ್ಕಂಡ ಜಮೀನು ಲೋಕೋಪಯೋಗಿ ಇಲಾಖೆಯ ವಶದಲ್ಲಿದ್ದು ಅದರಲ್ಲಿ ನಿರ್ಮಿಸಿದ್ದ ಪ್ರವಾಸಿ ಮಂದಿರದ ಜೊತೆಗೆ ಖಾಲಿ ಇರುವ ಜಾಗವನ್ನು ಬಸ್ ನಿಲ್ದಾಣಕ್ಕೆ ನೀಡಿದ್ದಲ್ಲಿ ಚಿಕ್ಕಬಳ್ಳಾಪುರದಲ್ಲಿ ಸದ್ಯಕ್ಕೆ ಗಣ್ಯ ವ್ಯಕ್ತಿಗಳಿಗೆ ಅತಿಥಿ ಗೃಹವು ಇಲ್ಲದಂತಾಗುತ್ತದೆ. ಆದುದರಿಂದ ಬೇರೆ ಜಾಗದಲ್ಲಿ ಅತಿಥಿ ಗೃಹವನ್ನು ನಿರ್ಮಿಸಿ ತದನಂತರ ನೀಡುವುದು ಸೂಕ್ತವೆಂದು ತಿಳಿಸಿರುತ್ತಾರೆ.

ಮೇಲೆ 3ರಲ್ಲಿ ಓದಲಾದ ದಿನಾಂಕ : 28–12–20012ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಒಟ್ಟು ಲಭ್ಯವಿರುವ ಜಮೀನಿನ ಬಗ್ಗೆ ಸರ್ವೆ ಮಾಡಿಸಿದ್ದು ಪ್ರಸ್ತುತ ಈ ಕೆಳಗಿನಂತೆ ಜಮೀನು ಲಭ್ಯವಿರುತ್ತದೆ ಎಂದು ತಿಳಿಸಿದ್ದಾರೆ.

* ಲೋಕೋಪಯೋಗಿ ಇಲಾಖೆಯ ಹೆಸರಿನಲ್ಲಿ ಮಾಲೀಕತ್ವ ಇರುವುದು–ಸರ್ವೆ ನಂ. 181 ರಲ್ಲಿ ಕೇವಲ 33 ಗುಂಟೆ ಮಾತ್ರ.
* ಸರ್ವೆ ನಂ. 182 ರಲ್ಲಿ 0–08 ಗುಂಟೆ ಸರ್ಕಾರಿ ಜಮೀನು.
* ಸರ್ವೆ ನಂ. 183/1 ರಲ್ಲಿ 1 ಎಕರೆ 14 ಗುಂಟೆ ಸರ್ಕಾರಿ ಜಮೀನು.

ಹೀಗೆ ಒಟ್ಟು 1 ಎಕರೆ 22 ಗುಂಟೆ ಕಂದಾಯ ಇಲಾಖೆಗೆ ಸೇರಿದ ಸರ್ಕಾರಿ ಜಮೀನು ಮತ್ತು ಲೋಕೋಪಯೋಗಿ ಇಲಾಖೆಗೆ ಸೇರಿದ 33 ಗುಂಟೆ ಸೇರಿಸಿ ಒಟ್ಟು 2 ಎಕರೆ 15 ಗುಂಟೆ ಜಮೀನಿನಲ್ಲಿ ಬಸ್ ನಿಲ್ದಾಣ ನಿರ್ಮಿಸಲು ಕೆ.ಎಸ್.ಆರ್.ಟಿ.ಸಿ. ಗೆ ನೀಡಲು ಪ್ರಸ್ತಾವನೆ ಬಂದಿರುತ್ತದೆ. (ಹಿಂದೆ ಹೇಳಿದಂತೆ ವಿಸ್ತೀರ್ಣವು 3 ಎಕರೆ 27 ಗುಂಟೆ ಅಲ್ಲ).

ಸದರಿ ವಿಷಯದ ಬಗ್ಗೆ 28–02–2012ರಂದು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಒಂದು ಸಭೆಯನ್ನು ನಡೆಸಲಾಗಿದ್ದು ಸದರಿ ಸಭೆಯಲ್ಲಿ ತೀರ್ಮಾನಿಸಿದಂತೆ ಚದಲಪುರ ಗ್ರಾಮದ ಸರ್ವೆ ನಂ. 80ರಲ್ಲಿ 2 ಎಕರೆ ರೇಷ್ಮೆ ಇಲಾಖೆಗೆ ಸೇರಿದ ಜಮೀನನ್ನು ಅತಿಥಿ ಗೃಹ ನಿರ್ಮಿಸಲು ಲೋಕೋಪಯೋಗಿ ಇಲಾಖೆಗೆ ತೋಟಗಾರಿಕೆ ಇಲಾಖೆ (ರೇಷ್ಮೆ) ಇವರಿಂದ ಮೇಲೆ 4ರಲ್ಲಿ ಓದಲಾದ ದಿನಾಂಕ : 2–3–2012ರಂದು ಆದೇಶವಾಗಿರುತ್ತದೆ. ಈ ಆದೇಶದ ಅನ್ವಯ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ, ಇವರ ಅ.ಜ್ಞಾ. ಸಂಖ್ಯೆ : ಎಲ್ಎನ್‌ಡಿ/ಸಿಆರ್/152/2011–12, ದಿನಾಂಕ : 08–03–2010ರಲ್ಲಿ ಮೇಲ್ಕಾಣಿಸಿದ 2 ಎಕರೆ ಜಮೀನನ್ನು ಲೋಕೋಪಯೋಗಿ ಇಲಾಖೆ, ಚಿಕ್ಕಬಳ್ಳಾಪುರ, ಇವರಿಗೆ ನೂತನ ಪ್ರವಾಸಿ ಮಂದಿರ ನಿರ್ಮಾಣ ಮಾಡಲು ವರ್ಗಾಯಿಸಿ ಆದೇಶಿಸಿರುತ್ತಾರೆ.

ಕಂದಾಯ ಇಲಾಖೆಗೆ ಸೇರಿದ ಸರ್ಕಾರಿ ಜಮೀನಿನ ಬಗ್ಗೆ ಕಂದಾಯ ಇಲಾಖೆಯ ಪತ್ರ ಸಂಖ್ಯೆ : ಆರ್‌ಡಿ 49 ಎಲ್‌ಜಿಕೆ 2013, ದಿನಾಂಕ : 10–07–2013ರಲ್ಲಿ ಒಟ್ಟು 1 ಎಕರೆ 22 ಗುಂಟೆ ಜಮೀನನ್ನು ಕ.ರಾ.ರ.ಸಾ.ನಿಗಮಕ್ಕೆ ಹೊಸ ಬಸ್ ನಿಲ್ದಾಣ ನಿರ್ಮಿಸಲು ಮಂಜೂರು ಮಾಡಲು ಪೂರ್ವಾನುಮತಿಯನ್ನು ಜಿಲ್ಲಾಧಿಕಾರಿಗಳಿಗೆ ನೀಡಲಾಗಿರುತ್ತದೆ. ಅದರಂತೆ ಜಿಲ್ಲಾಧಿಕಾರಿಗಳು ತಮ್ಮ ದಿನಾಂಕ : 29–07–2013ರ ಪತ್ರದಲ್ಲಿ ಕ್ರಮವಹಿಸಲಾಗುವುದೆಂದು ತಿಳಿಸಿರುತ್ತಾರೆ.

ರೇಷ್ಮೆ ಇಲಾಖೆಯಿಂದ 2 ಎಕರೆ ಜಮೀನನ್ನು ಲೋಕೋಪಯೋಗಿ ಇಲಾಖೆಗೆ ಉಚಿತವಾಗಿ ನೀಡಿದ್ದರಿಂದ, ಸಾರಿಗೆ ಇಲಾಖೆ ವತಿಯಿಂದ ಲೋಕೋಪಯೋಗಿ ಇಲಾಖೆಯ ಮಾಲೀಕತ್ವದ 33 ಗುಂಟೆ ಜಮೀನು ಮತ್ತು ಕಟ್ಟಡಗಳಿಗೆ ಸೇರಿಸಿ ರೂ. 2.50 ಕೋಟಿ ಮೊತ್ತವನ್ನು ಹೊಸ ಅತಿಥಿ ಗೃಹ ನಿರ್ಮಿಸಲು ಕ.ರಾ.ರ.ಸಾ.ನಿಗಮ ಇಂದ ನೀಡಲು ವ್ಯವಸ್ಥಾಪಕ ನಿರ್ದೇಶಕರು, ಕ.ರಾ.ರ.ಸಾ.ನಿಗಮ, ಇವರ ಪತ್ರ ಸಂಖ್ಯೆ : ಕೆಕ:ಕಾಇ:1661/2012–13, ದಿನಾಂಕ : 18–01–2013ರ ಪತ್ರದಲ್ಲಿ ಒಪ್ಪಿರುತ್ತಾರೆ.

ಪ್ರಸ್ತುತ ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ 33 ಗುಂಟೆ ಜಮೀನು ಹಾಗೂ ಅದರಲ್ಲಿರುವ ಕಟ್ಟಡಗಳ ಮೌಲ್ಯದ ಬಗ್ಗೆ ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಚಿಕ್ಕಬಳ್ಳಾಪುರ, ಇವರು ಮೇಲೆ 5ರಲ್ಲಿ ಓದಲಾದ ದಿನಾಂಕ : 17–07–2012ರ ಪತ್ರದಲ್ಲಿ ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನಿಗದಿಪಡಿಸಿರುವಂತೆ 33 ಗುಂಟೆ ಜಮೀನು/35521.00 ಚ.ಅ.ಗಳಿಗೆ ವಾಣಿಜ್ಯ ನಿವೇಶನ ಮಾರುಕಟ್ಟೆ ಮೌಲ್ಯದ ದರ ಪ್ರತಿ ಚ.ಅ.ಗೆ 1330.00 ರೂ.ಗಳಂತೆ ಒಟ್ಟು ರೂ. 4.68 ಕೋಟಿ ಹಾಗೂ ಕಟ್ಟಡದ ಮೊತ್ತ ರೂ. 0.15 ಕೋಟಿಗಳಾಗುತ್ತದೆಂದು ತಿಳಿಸುತ್ತಾ ಒಟ್ಟಾರೆ ಮೌಲ್ಯ ರೂ. 4.83 ಕೋಟಿಗಳಾಗುತ್ತದೆಂದು ವರದಿ ಮಾಡಿರುತ್ತಾರೆ.

ಮೇಲ್ಕಾಣಿಸಿದ ವಿವರಗಳನ್ನು ಸಚಿವ ಸಂಪುಟಕ್ಕೆ ಮಂಡಿಸಲಾಗಿತ್ತು. ಸಚಿವ ಸಂಪುಟದ ತೀರ್ಮಾನದನ್ವಯ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಲೋಇ 314 ಬಿಎಂಎಸ್ 2009(ಭಾ), ಬೆಂಗಳೂರು, ದಿನಾಂಕ : 05–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಚಿಕ್ಕಬಳ್ಳಾಪುರ ಪಟ್ಟಣದಲ್ಲಿ ಹೊಸದಾಗಿ ಕ.ರಾ.ರ.ಸಾ. ಸಂಸ್ಥೆಯ ಬಸ್ ನಿಲ್ದಾಣ ನಿರ್ಮಾಣ ಮಾಡಲು ಚಿಕ್ಕಬಳ್ಳಾಪುರ ತಾಲ್ಲೂಕು ವಾಪಸಂದ್ರ ಗ್ರಾಮದ ಸ.ನಂ. 181 ರಲ್ಲಿ ಲೋಕೋಪಯೋಗಿ ಇಲಾಖೆಗೆ ಸೇರಿದ 33 ಗುಂಟೆ ಜಮೀನು ಮತ್ತು

ಅತಿಥಿಗೃಹ ಕಟ್ಟಡವನ್ನು ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ. 68,18,000.00 ಇದ್ದು, 33 ಗುಂಟೆ ಜಮೀನಿಗೆ ರೂ.56,24,850.00 ಗಳಾಗುವುದರಿಂದ ಇದರಲ್ಲಿ ಶೇ. 25ರಷ್ಟು ರೂ. 14,06,213.00 ಗಳನ್ನು ಕ.ರಾ.ರ.ಸಾ.ಸಂಸ್ಥೆಯಿಂದ ಪಾವತಿಸಿಕೊಂಡು ಹಸ್ತಾಂತರಿಸಲು ಆದೇಶಿಸಲಾಗಿದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಜಮೀನನ್ನು ಕ.ರಾ.ರ.ಸಾ.ಸಂಸ್ಥೆಗೆ ಹಸ್ತಾಂತರಿಸಲು ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

**PR. 1034**

## INFORMATION TECHNOLOGY, BIO-TECHNOLOGY AND SCIENCE AND TECHNOLOGY SECRETARIAT

**Subject :** Establishment of Indian Institute of Information Technology in Karnataka University, Dharwad-reg.

**Preamble :**

Department of Higher Education, Ministry of Human Resource Development, Government of India, proposes to set up 20 new Indian Institute of Information Technology (IIIT) in different parts of the country. Partners in setting up the IIITs would be Govt. of India (MHRD), State Governments and Industry. Capital cost of each IIIT is tentatively estimated at Rs. 128 crores to be contributed in the ratio of 50 : 35 : 15 by the Central Government (Rs. 64 Crores), State Government (about Rs. 45 Crores) and the Industry (Rs. 19.2 Crores) respectively.

Karnataka State has submitted Detailed Project Report (DPR) to Govt. of India for setting up of IIIT in Karnataka University campus, Dharwad. State Government has given its commitment to provide 50-100 acres of land, free of cost, as well as to provide financial support of Rs. 45 Crores towards its share of Capital Expenditure. The State has also submitted letter of support and commitment of Karnataka State Electronics Development Corporation Ltd. (KEONICS) to provide Rs. 19.2 crores (15% of the project cost) as Industry Partner Contribution towards meeting the capital expenditure of the proposed IIIT, in Karnataka University campus, Dharwad. Letters seeking support from over a dozen leading industries have been sent from the desk of Hon'ble Chief Minister in November, 2012. If and when the Department receives commitment letters of support from potential private industry partners, the share of Keonics will be reduced or completely withdrawn depending upon the extent of financial contribution by the private industry partners. Department of Higher Education, Ministry of Human Resource Development, Government of India, in letter No. 29-8/2011-TS.I dated 23rd August, 2013, has conveyed that the competent authority has accorded approval of the proposal of Government of Karnataka for establishment of IIIT on PPP mode at Dharwad, with KEONICS as the Industry Partner contributing Rs. 19.2 crores. The State Government is required to enter into MoU and MoA with Government of India for establishment of IIIT.

The Higher Education Department of State Government has provided 50 acres of land, free of cost, in the Karnataka University campus, vide Government Order No. ED 153 UKV 2012, dated : 25-07-2013.

Planning Department has given its clearance for the project vide endorsement No. PD 17 FRO dated 03-07-2013.

Finance Department has given its concurrence vide UO Note No. FD 234 Exp-2/11, dated : 13-06-2011. State Government has allocated Rs. 11 Crores under Head of Account 3451-00-090-2-32-Indian Institute of Information Technology, Dharwad (IIITD) during the financial year 2013-14.

### Government Order No. ITD 07 MDA 2011, Bangalore, dated : 24th September, 2013.

In the circumstances explained above Government is pleased to accord approval for establishment of Indian Institute of Information Technology in Karnataka University, Dharwad subject to the following conditions :-

i) Estimated project cost of Rs. 128 crores to be met by Central Government, State Government and Industry Partner in the ratio of 50 : 35 : 15. Accordingly, State Government will have to provide about Rs. 45 crores.

ii) KEONICS, a Government of Karnataka undertaking, will be the Industry Partner for the project, contributing Rs. 19.2 crores towards the capital expenditure.

iii) KEONICS, as a stakeholder of the project, will either dilute its share or will withdraw completely, after the Private Industry Partners give their formal commitment of support with Bank Guarantee to the extent of Rs. 19.2 crores.

iv) As IIIT Dharwad is a Government of India scheme, the State Government will act as a facilitator and contribute its share of the capital expenditure, over a period of 4 to 5 years, subject to a maximum of Rs. 45 crores and 50 acres of land, free of cost, in Karnataka University campus, Dharwad.

v) Land for establishment of IIIT-Dharwad will be as per recommendations of Site Selection Committee constituted by the Department of Higher Education, Ministry of Human Resource Development (MHRD), Government of India.

vi) The core schools will be setup with complementary schools from the private sector, which together will constitute the Institute.

By Order and in the name of the Governor of Karnataka
**SRIVATSA KRISHNA**
Secretary to Government,
Department of IT, BT and S & T.

**P.R. 1035**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಪಿ. ಚಂದ್ರಹಾಸ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ಅಮಾನತ್ತಿನ ಅವಧಿಯ ಬಗ್ಗೆ.

**ಓದಲಾಗಿದೆ :**

1. ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಟಿಪ್ಪಣಿ ಸಂಖ್ಯೆ : ಎಫ್‌ಇಇ 112 ಎಸಿಎಸ್ 2012, ದಿನಾಂಕ : 2–6–2012.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 6–6–2012.
3. ನೋಟೀಸ್ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 12–10–2012.
4. ಅಧಿಕಾರಿಯವರ ಮನವಿ ದಿನಾಂಕ : 30–10–2012.
5. ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 27–11–2012.
6. ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಅಪಜೀ 6 ಸಿಆರ್‌ಎಸ್ 2013, ದಿನಾಂಕ : 8–2–2013.
7. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 21–2–2013.
8. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 13–6–2013.
9. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ : 27–5–2013.
10. ಎರಡನೇ ಕಾರಣ ಕೇಳುವ ನೋಟಿಸ್ ದಿನಾಂಕ : 14–6–2013.
11. ಅಧಿಕಾರಿಯವರ ಮನವಿ ದಿನಾಂಕ : 4–7–2013.
12. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ದಿನಾಂಕ : 19–8–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ, ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಇವರ ಟಿಪ್ಪಣಿಯಲ್ಲಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಕೆ.ಪಿ. ಚಂದ್ರಹಾಸ ಇವರು ಕಡತ ಸಂಖ್ಯೆ : ಎಫ್.ಇ.ಇ. 192 ಎಫ್.ಎಲ್.ಎಲ್ 2008ರಲ್ಲಿ ಸಚಿವ ಸಂಪುಟವು ಕೈಗೊಂಡ ನಿರ್ಣಯದ ಟಿಪ್ಪಣಿ ಸಂಖ್ಯೆ : ಸಿ-209/2012ರನ್ವಯ ಸರ್ಕಾರವು ಆದೇಶವನ್ನು ಹೊರಡಿಸುವ ಮುನ್ನ, ಸದರಿ ಸಚಿವ ಸಂಪುಟದ ಟಿಪ್ಪಣಿಯನ್ನು ಮಾಹಿತಿ ಹಕ್ಕು ಕಾಯ್ದೆಯಡಿ ಖಾಸಗಿ ಸಂಸ್ಥೆಯೊಂದಕ್ಕೆ ನೀಡಿದ್ದು, ಇದರಿಂದಾಗಿ ಸದರಿ ಖಾಸಗಿ ಸಂಸ್ಥೆಯ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಚಿವ ಸಂಪುಟದ ತೀರ್ಮಾನಕ್ಕೆ ತಡೆಯಾಜ್ಞೆಯನ್ನು ತಂದಿರುತ್ತದೆಂದೂ, ಈ ರೀತಿ ಶ್ರೀ ಕೆ.ಪಿ. ಚಂದ್ರಹಾಸ ಅಧೀನ ಕಾರ್ಯದರ್ಶಿ, ಇವರು ಗುರುತರವಾದ ಆರೋಪ/ಕರ್ತವ್ಯಚ್ಯುತಿ ಎಸಗಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸುವಂತೆ ಕೋರಿದ್ದರ ಮೇರೆಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)ಡಿ ರಡಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (3)ರಲ್ಲಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಯ ನಿಯಮ 11ರನ್ವಯ ನೋಟೀಸ್‌ನೊಂದಿಗೆ, ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿ ಆರೋಪಿತ ಅಧಿಕಾರಿಯವರಿಂದ ಪ್ರತಿರಕ್ಷಣಾ ಹೇಳಿಕೆಯನ್ನು ಪಡೆದು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿದ ಸರ್ಕಾರವು ಮೇಲೆ (7) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರೋಪಿತ ಅಧಿಕಾರಿಯವರ ವಿರುದ್ಧ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಿ ಆದೇಶಿಸಿತ್ತು.

ಆರೋಪಿತ ಅಧಿಕಾರಿಯವರು ಅಮಾನತ್ತಿನಲ್ಲಿ ಆರು ತಿಂಗಳ ಅವಧಿಯನ್ನು ಕಳೆದುದರಿಂದ ಮೇಲೆ (8)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರೋಪಿತ ಅಧಿಕಾರಿಯವರ ವಿರುದ್ಧದ ಶಿಸ್ತಿನ ಕ್ರಮವನ್ನು ಬಾಕಿಯಿರಿಸಿ, ಅವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಮನರ್‌ಸ್ಥಾಪಿಸಿ ಆದೇಶಿಸಲಾಗಿದೆ.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು, ಮೇಲೆ (9)ರಲ್ಲಿ ಓದಲಾದ ದಿನಾಂಕ : 27–5–2013ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಇದರಲ್ಲಿ ಶ್ರೀ ಕೆ.ಪಿ. ಚಂದ್ರಹಾಸ ಇವರು ಕರ್ತವ್ಯ ಶ್ರದ್ಧೆಯಿಂದ ಇರದೇ ಸರ್ಕಾರಿ ನೌಕರರಿಗೆ ಯೋಗ್ಯವಲ್ಲದ್ದನ್ನು ಮಾಡಿ, ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿರುವುದು ಸಾಬೀತಾಗಿದೆಯೆಂದು ನಿರ್ಣಯಿಸಿ ವರದಿ ನೀಡಿರುತ್ತಾರೆ.

ಮೇಲೆ (10)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಆರೋಪಿತ ಅಧಿಕಾರಿಯವರಿಗೆ ಜಾರಿಗೊಳಿಸಿ ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿಯ ಬಗ್ಗೆ ಅಧಿಕಾರಿಯವರ ಹೇಳಿಕೆಯನ್ನು ಪಡೆದು ಕೂಲಂಕಷವಾಗಿ ಪರಿಶೀಲಿಸಿ, ಆರೋಪಿತ ಅಧಿಕಾರಿಯವರು ಖಾಸಗಿ ಸಂಸ್ಥೆಗೆ ಸಚಿವ ಸಂಪುಟ ಸಭೆಯು ಕೈಗೊಂಡ ನಿರ್ಣಯದ ಪ್ರತಿಯನ್ನು ಸರ್ಕಾರಿ ಆದೇಶವನ್ನು ಹೊರಡಿಸುವ ಮುನ್ನವೇ ಮಾಹಿತಿ ಹಕ್ಕು ಕಾಯಿದೆಯಡಿ ನೀಡಿರುವುದರ ಮೂಲಕ ಕರ್ತವ್ಯಚ್ಯುತಿ ಎಸಗಿರುವುದು ವಿಚಾರಣಾ ವರದಿಯಿಂದ ಸಾಬೀತಾಗಿರುವುದರಿಂದ ವಿಚಾರಣಾ ವರದಿಯನ್ನು ಅಂಗೀಕರಿಸಿದ ಸರ್ಕಾರವು ಮೇಲೆ ಓದಲಾದ (12)ರ ಆದೇಶದಲ್ಲಿ ಶ್ರೀ. ಕೆ.ಪಿ. ಚಂದ್ರಹಾಸ, ಸರ್ಕಾರದ ಅಧೀನ ಕಾರ್ಯದರ್ಶಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 8(iii)ರನ್ವಯ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ. ಅಧಿಕಾರಿಯವರ ವಿರುದ್ಧ ಹೊರಿಸಿದ್ದ ಆರೋಪಗಳು ಸಾಬೀತಾಗಿದ್ದು ಇವರ ವಿರುದ್ಧದ ಇಲಾಖಾ ವಿಚಾರಣೆಯು ದಂಡನೆ ವಿಧಿಸುವ ಮೂಲಕ ಅಂತಿಮಗೊಂಡಿರುವುದರಿಂದ ಶ್ರೀ ಕೆ.ಪಿ. ಚಂದ್ರಹಾಸ, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಅಮಾನತ್ತಿನಲ್ಲಿದ್ದ ದಿನಾಂಕ : 6–6–2012 ರಿಂದ ದಿನಾಂಕ: 13–6–2013ರವರೆಗಿನ ಅವಧಿಯನ್ನು ಅಮಾನತ್ತಿನಲ್ಲಿದ್ದ ಅವಧಿ ಎಂದೇ ಪರಿಗಣಿಸಲು ಸರ್ಕಾರವು ನಿರ್ಧರಿಸಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಪಿ. ಚಂದ್ರಹಾಸ, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧದ ಆರೋಪಗಳು ಇಲಾಖಾ ವಿಚಾರಣೆಯಿಂದ ಸಾಬೀತಾಗಿದ್ದು, ಈ ಪ್ರಕರಣದಲ್ಲಿ ಶ್ರೀ ಕೆ.ಪಿ. ಚಂದ್ರಹಾಸ, ಸರ್ಕಾರದ ಅಧೀನ ಕಾರ್ಯದರ್ಶಿ ಇವರಿಗೆ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iii)ರನ್ವಯ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿರುವುದರಿಂದ ಶ್ರೀ ಕೆ.ಪಿ. ಚಂದ್ರಹಾಸ, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಅಮಾನತ್ತಿನಲ್ಲಿದ್ದ ದಿನಾಂಕ : 6–6–2012 ರಿಂದ ದಿನಾಂಕ : 13–6–2013ರವರೆಗಿನ ಅವಧಿಯನ್ನು **"ಅಮಾನತ್ತಿನಲ್ಲಿದ್ದ ಅವಧಿ"** ಎಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**PR. 1036**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 01 ಇಸಪ 2013, ಬೆಂಗಳೂರು, ದಿನಾಂಕ : 30–09–2013.**

**ವಿಷಯ** : ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ನೇಮಕಾತಿ ಬಗ್ಗೆ.

**ಉಲ್ಲೇಖ :** ಅಧಿಸೂಚನೆ ಸಂಖ್ಯೆ : ಸಿಆಸುಇ : 01 : ಇಸಪ : 2013, ದಿನಾಂಕ : 20–08–2013.

ರಾಜ್ಯದ ಅಭಿವೃದ್ಧಿ ಯೋಜನಾ ಕಾರ್ಯಕ್ರಮಗಳ ಪರಿಶೀಲನೆ ಹಾಗೂ ಅಹವಾಲುಗಳ ವಿಚಾರಣೆ, ಅನಿರೀಕ್ಷಿತ ತಪಾಸಣೆ ಹಾಗೂ ಸರ್ಕಾರದೆ ಯಾವುದೇ ಯೋಜನೆಗಳ ಜಾರಿ ಕುರಿತು ಪರಿಶೀಲನೆ ಮಾಡಿ ಸರ್ಕಾರಕ್ಕೆ ವರದಿ ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಹಾಗೂ ಕಾರ್ಯದರ್ಶಿಗಳ ಮಟ್ಟದ ಅಧಿಕಾರಿಗಳನ್ನು ಉಲ್ಲೇಖಿತ ಅಧಿಸೂಚನೆ ದಿನಾಂಕ : 20–8–2013ರಲ್ಲಿ ವಿವಿಧ ಜಿಲ್ಲೆಗಳಿಗೆ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳನ್ನಾಗಿ ನೇಮಕ ಮಾಡಲಾಗಿತ್ತು. ಮುಂದುವರೆದು, ಶ್ರೀ ಐ.ಎಸ್.ಎನ್. ಪ್ರಸಾದ್, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರ ಬದಲಿಗೆ ಶ್ರೀಮತಿ ನಾಗಾಂಬಿಕದೇವಿ, ಸರ್ಕಾರದ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ ಇವರನ್ನು ಚಿಕ್ಕಬಳ್ಳಾಪುರ ಜಿಲ್ಲೆಯ ಉಸ್ತುವಾರಿ ಕಾರ್ಯದರ್ಶಿಯನ್ನಾಗಿ ಹಾಗೂ ಶ್ರೀ ಆರ್. ಶ್ರೀಧರನ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ ಮತ್ತು ಪರಿಸರ ಇಲಾಖೆ, ಇವರು ಕೇಂದ್ರ ಸರ್ಕಾರದ ಅಪರ ಕಾರ್ಯದರ್ಶಿ, ಗಣಿ ಮಂತ್ರಾಲಯಕ್ಕೆ ನಿಯೋಜನೆಗೊಂಡಿರುವುದರಿಂದ ಇವರ ಬದಲಿಗೆ ಶ್ರೀ ಟಿ.ಎಂ. ವಿಜಯಭಾಸ್ಕರ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ಇಲಾಖೆ, ಇವರನ್ನು ಬೆಳಗಾಂ ಜಿಲ್ಲೆಯ ಉಸ್ತುವಾರಿ ಕಾರ್ಯದರ್ಶಿಯನ್ನಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

(ಆಡಳಿತ ಸುಧಾರಣೆ)

ಸಿಆಸು ಇಲಾಖೆ (ಕಾರ್ಯಾಧ್ಯಯನ).

**ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಹಾಗೂ ಕಾರ್ಯದರ್ಶಿ ಮಟ್ಟದ ಇಲಾಖಾ ಮುಖ್ಯಸ್ಥರುಗಳು ಇವರುಗಳಿಗೆ ಉಸ್ತುವಾರಿ ವಹಿಸಿರುವ ಜಿಲ್ಲಾವಾರು ವಿವರಗಳು**

**(ಅಧಿಸೂಚನೆ ಸಂಖ್ಯೆ : ಸಿಆಸುಇ 1 ಇಸಪ 2013, ದಿನಾಂಕ : 30–09–2013)**

**ಅಧಿಕಾರಿಗಳಿಗೆ ಹಂಚಿಕೆಯಾದ ಜಿಲ್ಲಾವಾರು ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಉಸ್ತುವಾರಿ ಜಿಲ್ಲೆಯ ಹೆಸರು |
|---|---|---|
| 1. | ಶ್ರೀ ಭರತ್‌ಲಾಲ್ ಮೀನಾ | ದಕ್ಷಿಣ ಕನ್ನಡ |
| 2. | ಶ್ರೀ ಪಿ.ಎನ್. ಶ್ರೀನಿವಾಸಾಚಾರಿ | ಕೋಲಾರ |
| 3. | ಶ್ರೀ ಬಸವರಾಜು | ರಾಮನಗರ |
| 4. | ಶ್ರೀ ಟಿ.ಎಂ. ವಿಜಯಭಾಸ್ಕರ್ | ಬೆಳಗಾಂ |
| 5. | ಶ್ರೀ ಮದನ್ ಗೋಪಾಲ್ | ಗದಗ |
| 6. | ಶ್ರೀ ಪಿ. ರವಿಕುಮಾರ್ | ಗುಲ್ಬರ್ಗಾ |
| 7. | ಡಾ॥ ಇ.ವಿ. ರಮಣರೆಡ್ಡಿ | ಬೀದರ್ |
| 8. | ಶ್ರೀ ಶಂಭು ದಯಾಳ್ ಮೀನಾ | ಚಾಮರಾಜನಗರ |
| 9. | ಶ್ರೀ ರಾಜೀವ್ ಚಾವ್ಲಾ | ಚಿಕ್ಕಮಗಳೂರು |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಉಸ್ತುವಾರಿ ಜಿಲ್ಲೆಯ ಹೆಸರು |
|---|---|---|
| 10. | ಡಾ॥ ರಾಜ್‌ಕುಮಾರ್ ಖತ್ರಿ | ಕೊಡಗು |
| 11. | ಡಾ॥ ರಜನೀಶ್ ಗೋಯಲ್ | ಬಳ್ಳಾರಿ |
| 12. | ಶ್ರೀ ಇ. ವೆಂಕಟಯ್ಯ | ರಾಯಚೂರು |
| 13. | ಶ್ರೀಮತಿ ನಾಗಾಂಬಿಕದೇವಿ | ಚಿಕ್ಕಬಳ್ಳಾಪುರ |
| 14. | ಡಾ॥ ಶಾಲಿನಿ ರಜನೀಶ್ | ತುಮಕೂರು |
| 15. | ಶ್ರೀಮತಿ ರಶ್ಮಿ ಮಹೇಶ್ | ಕೊಪ್ಪಳ |
| 16. | ಶ್ರೀ ಜಿ. ಕುಮಾರ್ ನಾಯಕ್ | ಹಾಸನ |
| 17. | ಶ್ರೀ ಅಮರ ನಾರಾಯಣ | ಮಂಡ್ಯ |
| 18. | ಶ್ರೀ ಟಿ.ಕೆ. ಅನಿಲ್ ಕುಮಾರ್ | ಶಿವಮೊಗ್ಗ |
| 19. | ಶ್ರೀ ಹರ್ಷಗುಪ್ತಾ | ಬಾಗಲಕೋಟೆ |
| 20. | ಶ್ರೀ ಕಪಿಲ ಮೋಹನ್ | ಬಿಜಾಪುರ |
| 21. | ಶ್ರೀ ಅಜಯ್ ಸೇಠ್ | ಧಾರವಾಡ |
| 22. | ಶ್ರೀ ಎಂ.ಬಿ. ದ್ಯಾಬೇರಿ | ಹಾವೇರಿ |
| 23. | ಶ್ರೀ ಎಂ.ಆರ್. ಕಾಂಬ್ಳೆ | ಉತ್ತರ ಕನ್ನಡ |
| 24. | ಶ್ರೀಮತಿ ವಿ. ಮಂಜುಳ | ಯಾದಗಿರಿ |
| 25. | ಶ್ರೀಮತಿ ಅಮಿತಾ ಪ್ರಸಾದ್ | ಮೈಸೂರು |
| 26. | ಶ್ರೀ ಅಂಜುಂ ಪರ್ವೇಜ್ | ಬೆಂಗಳೂರು ನಗರ |
| 27. | ಶ್ರೀ ಬಿ.ಹೆಚ್. ಅನಿಲ್ ಕುಮಾರ್ | ದಾವಣಗೆರೆ |
| 28. | ಶ್ರೀ ಮಂಜುನಾಥ್ ಪ್ರಸಾದ್ | ಚಿತ್ರದುರ್ಗ |
| 29. | ಶ್ರೀಮತಿ ವಂದಿತಾ ಶರ್ಮ | ಬೆಂಗಳೂರು ಗ್ರಾಮಾಂತರ |
| 30. | ಶ್ರೀ ಮಹೇಶ್ವರ್ ರಾವ್ | ಉಡುಪಿ |

**ಪಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
(ಆಡಳಿತ ಸುಧಾರಣೆ)
ಸಿಆಸು ಇಲಾಖೆ (ಕಾರ್ಯಾಧ್ಯಯನ).

**PR. 1037**
**SC-50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ)ಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 11 ಎಸ್‌ಜಿಬಿ 2000, ದಿನಾಂಕ : 14–03–2000.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 11 ಸಅಸೇ 2000, ದಿನಾಂಕ : 29–07–2000.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 07 ಸಸಿವಿ 2001, ದಿನಾಂಕ : 20–03–2001.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 19 ಸಸಿವಿ 2002, ದಿನಾಂಕ : 06–01–2002.
5. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 244 ಸಅಸೇ 2001, ದಿನಾಂಕ : 23–04–2002.
6. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 244 ಸಅಸೇ 2001, ದಿನಾಂಕ : 12–08–2002.
7. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 244 ಸಅಸೇ 2001, ದಿನಾಂಕ : 31–10–2002.
8. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 03 ಸಸಿವಿ 2007, ದಿನಾಂಕ : 15–01–2007.
9. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 606 ಸಅಸೇ 2010, ದಿನಾಂಕ : 12–01–2011.
10. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಯ ಸಿಆಸುಇ 1519 ಲೆಪ–ಐಆರ್‌ಎಲ್‌ಎ 2013.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 14–03–2000ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವಾ ಅಧಿಕಾರಿಗಳು ಹಾಗೂ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ವೇತನ,

ಭತ್ಯೆ ಹಾಗೂ ಇತರೆ ಕ್ಲೇಮ್‌ಗಳನ್ನು ಪರಿಶೀಲಿಸಿ ಪಾವತಿಸುವ ಸಲುವಾಗಿ ಈ ಕೆಳಕಂಡ ಅಧಿಕಾರಿ/ಸಿಬ್ಬಂದಿಗಳನ್ನು ಒಳಗೊಂಡಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 2. | ಶಾಖಾಧಿಕಾರಿ | 01 |
| 3. | ಅಕೌಂಟ್ಸ್ ಅಸಿಸ್ಟೆಂಟ್ | 01 |
| 4. | ಸಹಾಯಕರು | 02 |
| 5. | ಕಿರಿಯ ಸಹಾಯಕ | 01 |
| 6. | ಶೀಘ್ರಲಿಪಿಗಾರ | 01 |
| 7. | ಕ್ಯಾಷಿಯರ್ | 01 |
| 8. | ತಾಂತ್ರಿಕ ಸಹಾಯಕರು (ವೇತನ ಶ್ರೇಣಿ ರಹಿತ ಹುದ್ದೆ) | 01 |
| 9. | ದಲಾಯತ್ | 01 |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 29–07–2000ರ ಸರ್ಕಾರದ ಆದೇಶದಲ್ಲಿ ಅಕೌಂಟ್ಸ್ ಅಸಿಸ್ಟೆಂಟ್‌ಗಳ ಹುದ್ದೆಯನ್ನು ಅಕೌಂಟ್ಸ್ ಸೂಪರಿಂಟೆಂಡೆಂಟ್ ಹುದ್ದೆಗೆ ಉನ್ನತೀಕರಿಸಲಾಗಿದೆ ಹಾಗೂ ಎರಡು ಸಹಾಯಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಸಹಾಯಕ ಹುದ್ದೆಗೆ ಉನ್ನತೀಕರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ : 23–04–2002ರ ಆದೇಶದಲ್ಲಿ ಸಿಆಸು ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಗೆ ಹೆಚ್ಚುವರಿಯಾಗಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| ಅ. | ಡಾಟಾ ಎಂಟ್ರಿ ಆಪರೇಟರ್ | 01 ಹುದ್ದೆ |
| ಆ. | ಸಹಾಯಕ | 01 ಹುದ್ದೆ |
| ಇ. | ಬೆರಳಚ್ಚುಗಾರರು | 01 ಹುದ್ದೆ |

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ : 12–08–2002ರ ಆದೇಶದಲ್ಲಿ ಒಂದು ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ : 30–10–2002ರ ಸರ್ಕಾರಿ ಆದೇಶದಲ್ಲಿ ಒಂದು ವೇತನ ಶ್ರೇಣಿ ರಹಿತ ತಾಂತ್ರಿಕ ಸಹಾಯಕರ ಹುದ್ದೆಯನ್ನು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯೆಂದು ಮರು ಪದನಾಮೀಕರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಿಆಸು ಇಲಾಖೆ, ಲೆಕ್ಕಪತ್ರ–ಐಆರ್‌ಎಲ್‌ಎ ಶಾಖೆಯಲ್ಲಿನ ಹುದ್ದೆಗಳನ್ನು ದಿನಾಂಕ : 14–03–2007 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಿಆಸು ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯಲ್ಲಿನ ಹುದ್ದೆಗಳನ್ನು ದಿನಾಂಕ : 13–03–2008 ರಿಂದ 14–03–2012 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (10) ರಲ್ಲಿ ಓದಲಾದ ಕಡತದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ : 15–03–2012 ರಿಂದ 14–03–2014 ರವರೆಗೆ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 709 ಸಅಸೇ 2013, ಬೆಂಗಳೂರು, ದಿನಾಂಕ : 24ನೇ ಸೆಪ್ಟೆಂಬರ್, 2013.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ : 15–03–2012 ರಿಂದ 14–03–2014 ರವರೆಗಿನ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 2. | ಶಾಖಾಧಿಕಾರಿ | 01 |
| 3. | ತಾಂತ್ರಿಕ ಸಹಾಯಕರು/ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 01 |
| 4. | ಹಿರಿಯ ಸಹಾಯಕ | 01 |
| 5. | ಸಹಾಯಕರು | 03 |
| 6. | ಕಿರಿಯ ಸಹಾಯಕ | 01 |

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 7. | ಶೀಘ್ರಲಿಪಿಗಾರ | 01 |
| 8. | ಕ್ಯಾಷಿಯರ್ | 01 |
| 9. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 01 |
| 10. | ಡಾಟಾ ಎಂಟ್ರಿ ಆಪರೇಟರ್ | 01 |
| 11. | ಬೆರಳಚ್ಚುಗಾರರು | 01 |
| 12. | ದಲಾಯ್ (ದಲಾಯತ್–1+ಆಫೀಸ್ ಆರ್ಡರ್ಲಿ–1) | 02 |
| | ಒಟ್ಟು | 15 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ : 10–07–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6).

PR. 1038

## ಆರ್ಥಿಕ ಸಚಿವಾಲಯ

**ವಿಷಯ** : ಶ್ರೀ ಡಿ.ಆರ್. ರೇಣುಕಾನಂದ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಅವರ ವಿರುದ್ಧ ಇಲಾಖಾ ವಿಚಾರಣೆ– ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆಇ 3 ವಾತೆತ 2010, ದಿನಾಂಕ : 11–11–2011.
2. ವಿಚಾರಣಾಧಿಕಾರಿಯವರ ವರದಿ ದಿನಾಂಕ : 02–04–2012.
3. 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ : ಆಇ 3 ವಾತೆತ 2010, ದಿನಾಂಕ : 08–06–2012.
4. ಸರ್ಕಾರದ ಪತ್ರ ಸಂಖ್ಯೆ : ಆಇ 3 ವಾತೆತ 2010, ದಿನಾಂಕ : 19–04–2013.
5. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ : ಪಿಎಸ್‌ಸಿ 38 ಸಿಎನ್‌ಎಸ್ 13 ಪಿಎಸ್‌ಸಿ, ದಿನಾಂಕ : 12–06–2013.

**ಪ್ರಸ್ತಾವನೆ :**

ಶ್ರೀ ಡಿ.ಆರ್. ರೇಣುಕಾನಂದ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಇವರು ದಾವಣಗೆರೆಯ ವಸೂಲಿ–1 ಮತ್ತು 2ರ ಪ್ರಭಾರ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾಗಿ ದಿನಾಂಕ : 31–12–2008ರಿಂದ ಕಾರ್ಯನಿರ್ವಹಿಸುತ್ತಿದ್ದಾಗ, ಇಲಾಖೆಯ ಕಾಯಿದೆ ಅನುಷ್ಠಾನದ ವೆಚ್ಚಕ್ಕಾಗಿ ಬ್ಯಾಂಕ್‌ನಲ್ಲಿ ಇಡಲಾಗಿದ್ದ ರೂ. 1,08,000/– ಗಳಲ್ಲಿ ರೂ. 1,00,000/– ಗಳನ್ನು 2009ರ ಏಪ್ರಿಲ್‌ನಲ್ಲಿ ಎರಡು ಸೆಲ್ಫ್ ಚೆಕ್‌ಗಳ ಮೂಲಕ ಡ್ರಾ ಮಾಡಿ ಸ್ವಂತಕ್ಕೆ ಬಳಸಿಕೊಂಡು ; ಖಾತೆಯಲ್ಲಿ ಹಣವಿಲ್ಲದಿದ್ದರೂ ರೂ. 2,00,000/– ಹಾಗೂ ರೂ. 85,000/– ಗಳಿಗೆ 2 ಚೆಕ್‌ಗಳನ್ನು ಖಾಸಗಿ ವ್ಯಕ್ತಿಗಳಿಗೆ ನೀಡಿದ ; ಹಾಗೂ ಉಳಿದ 6 ಚೆಕ್‌ಗಳನ್ನು ಲಪಟಾಯಿಸಿ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡ ಆರೋಪಗಳಿಗಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ : 11–11–2011ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎ.ಕೃಷ್ಣಪ್ಪ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ : 02–04–2012ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಶಿಸ್ತು ಪ್ರಾಧಿಕಾರಿ ಪರ ಒಂದನೇ ಸಾಕ್ಷಿಯ ನೀಡಿದ ಹೇಳಿಕೆಯಂತೆ ಬ್ಯಾಂಕ್ ಆಫ್ ಬರೋಡಾದ ದಾವಣಗೆರೆ ಶಾಖೆಯ ಹಿರಿಯ ವ್ಯವಸ್ಥಾಪಕರು ಅವರಿಗೆ ದಿನಾಂಕ : 02–12–2009 ರ ಪತ್ರ ಬರೆದು ಅವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಆರೋಪಿಯು ಸರ್ಕಾರದ ಹೆಸರಿನಲ್ಲಿ ನೀಡಲಾದ ಚೆಕ್‌ಗಳನ್ನು ಸರ್ಕಾರದ ಕೆಲಸಕ್ಕೆ ಸಂಬಂಧಪಡದ ವ್ಯಕ್ತಿಗಳಿಗೆ ನೀಡಿದ್ದು, ಖಾತೆಯಲ್ಲಿ ಹಣ ಇಲ್ಲದ ಕಾರಣ ಅವುಗಳು ಬೌನ್ಸ್ ಆಗಿದ್ದು, ಸರ್ಕಾರದ ಹಣವನ್ನು ಆರೋಪಿಯು ದುರ್ಬಳಕೆ ಮಾಡಿಕೊಂಡಿದ್ದಾರೆಂಬ ಮಾಹಿತಿ ನೀಡಿದ್ದಾರೆ. ಚೆಕ್‌ಗಳನ್ನು ನಗದೀಕರಿಸದಿರುವಂತೆ ಸಾಕ್ಷಿಯು ದಿನಾಂಕ : 10–12–2009 ರಂದು ಪತ್ರ ಬರೆದು 14–12–2009 ರಂದು ಬ್ಯಾಂಕಿಗೆ ಖುದ್ದಾಗಿ ಭೇಟಿ ನೀಡಿ Bank Statement of Account ಪಡೆದು ಪರಿಶೀಲಿಸಿದ್ದಾರೆ. ಒಂದು ಸೆಲ್ಫ್ ಚೆಕ್‌ನಲ್ಲಿ ರೂ. 75.000/–ಗಳನ್ನು ದಿನಾಂಕ : 09–04–2009 ರಂದು ಮತ್ತೊಂದು ಸೆಲ್ಫ್ ಚೆಕ್‌ನಲ್ಲಿ ರೂ. 30,000/– ಗಳನ್ನು ದಿನಾಂಕ : 21–04–2009 ರಂದು ಡ್ರಾ ಮಾಡಿದ್ದಾರೆ. ಚೆಕ್‌ಗಳಿಗೆ ಅಧಿಕಾರಿಯು ಕಛೇರಿಯ ಸೀಲ್ ಹಾಕಿದ್ದಾರೆ. ಆದರೆ ಹಾಜರುಪಡಿಸಲ್ಪಟ್ಟ ನಗದು ಪುಸ್ತಕದಲ್ಲಿ ಆ ರೀತಿ ಡ್ರಾ ಮಾಡಿದ ಬಗ್ಗೆ ನಮೂದು ಇಲ್ಲ ಹಾಗೂ ಯಾವ ಉದ್ದೇಶಕ್ಕಾಗಿ ಡ್ರಾ ಮಾಡಲಾಯಿತು ಎಂಬ ಕುರಿತು ಉಲ್ಲೇಖ ಇಲ್ಲ. ಇದರಿಂದಾಗಿ ಸರ್ಕಾರದ ಹಣ ದುರುಪಯೋಗ ಪಡಿಸಿಕೊಂಡಿದ್ದಾರೆ ; ಅದೇ ಚೆಕ್ ಪುಸ್ತಕದಿಂದ ಚೆಕ್ ಸಂಖ್ಯೆ : 169634 ರಲ್ಲಿ ರೂ. 85,000/–ಗಳನ್ನು ನಮೂದಿಸಿ ಒಬ್ಬ ವ್ಯಕ್ತಿಗೆ ನೀಡಿದ್ದಾರೆ. ನಂತರ ರೂ. 2.00 ಲಕ್ಷಗಳನ್ನು ಚೆಕ್ ಸಂಖ್ಯೆ 169638ರಲ್ಲಿ ನಮೂದಿಸಿ ಸಹಿ ಮಾಡಿ ದಿನಾಂಕ : 25–11–2009 ರಂದು ಎಂ.ಬಿ. ಅರುಣ್ ಎಂಬುವರಿಗೆ ನೀಡಿದ್ದಾರೆ. ಈ ಎರಡೂ ಸಹ ಸರ್ಕಾರದ ಕೆಲಸಗಳಿಗೆ ಸಂಬಂಧಪಡದ ವ್ಯಕ್ತಿಗಳಿಗೆ ನೀಡಿದ ಚೆಕ್‌ಗಳಾಗಿವೆ. ಅಧಿಕಾರಿಗೆ ನೀಡಲ್ಪಟ್ಟ ಚೆಕ್‌ಬುಕ್‌ನಲ್ಲಿದ್ದ ಲೀಫ್‌ಗಳಲ್ಲಿದ್ದವಾಗಿವೆ. ಎರಡನೇ ಸಾಕ್ಷಿ ಹಾಗೂ ಆರೋಪಿಯ ಪೂರ್ವಾಧಿಕಾರಿಯು ನೀಡಿದ ಸಾಕ್ಷ್ಯದಂತೆ ವಾಣಿಜ್ಯ ತೆರಿಗೆ ಆಯುಕ್ತರ ದಿನಾಂಕ : 27–03–2006ರ ಪತ್ರದ ಮೂಲಕ ಬಿಡುಗಡೆ ಮಾಡಲಾದ ರೂ. 1.00 ಲಕ್ಷಗಳನ್ನು ಅವರು ದಾವಣಗೆರೆಯ ಬ್ಯಾಂಕ್ ಆಫ್ ಬರೋಡಾ ಶಾಖೆಯಲ್ಲಿ ದಿನಾಂಕ : 11–05–2006

ರಂದು ಉಳಿತಾಯ ಖಾತೆ ಸಂಖ್ಯೆ : 13330100002558 ನ್ನು ತೆರೆದು ತೊಡಗಿಸಿದ್ದರು. ಆಗ ಪಡೆದ ಚೆಕ್ ಪುಸ್ತಕದಲ್ಲಿ ಚೆಕ್ ಲೀಫ್ 169631 ರಿಂದ 169640 ಹೊಂದಿರುವ ಒಟ್ಟು 10 ಚೆಕ್ ಹಾಳೆಗಳಿದ್ದು, ಸಾಕ್ಷಿಯ ವರ್ಗಾವಣೆಯಾದ ನಂತರ ಅವರ ಕಾರ್ಯಭಾರವನ್ನು ಚಂದ್ರಪ್ಪ ಇವರಿಗೆ ವಹಿಸಿಕೊಟ್ಟಿದ್ದು, ನಂತರ ಸದರಿ ಚಂದ್ರಪ್ಪನವರು ಆಪಾದಿತರಾದ ಶ್ರೀ ಬಿ.ಆರ್. ರೇಣುಕಾನಂದ ರವರಿಗೆ ಕಾರ್ಯಭಾರವನ್ನು ಹಸ್ತಾಂತರ ಮಾಡಿರುವುದು ಕಂಡುಬರುತ್ತದೆ. ಅಂದರೆ ಬಿಡುಗಡೆ ಮಾಡಲಾದ ರೂ. 1.00 ಲಕ್ಷ ಹಣವು ಆಪಾದಿತರ ಕಾರ್ಯ ನಿರ್ವಹಿಸಿದ ಅವಧಿಯಲ್ಲಿ ಬ್ಯಾಂಕ್ ಆಫ್ ಬರೋಡಾದ ಉಳಿತಾಯ ಖಾತೆಯಲ್ಲಿ ಇತ್ತು ಎಂಬ ಅಂಶವು ರುಜುವಾತಾಗುತ್ತದೆ.

ಮೂರನೇ ಸಾಕ್ಷಿ ಮತ್ತು ಇಲಾಖಾ ಪರ ಸಾಕ್ಷಿ ಇವರು ನೀಡಿದ ಸಾಕ್ಷದಂತೆ ಆಪಾದಿತರು ದಿನಾಂಕ : 09–12–2009 ರಿಂದ ಕಛೇರಿಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಜಂಟಿ ಆಯುಕ್ತರು ಮೂರನೇ ಸಾಕ್ಷಿಯನ್ನು ಪ್ರಭಾರ ಅಧಿಕಾರಿಯಾಗಿ ನೇಮಿಸಿದ್ದು, ನಂತರ ಜಂಟಿ ಆಯುಕ್ತರು ದಿನಾಂಕ : 13–01–2010 ರಂದು ಕಛೇರಿಗೆ ಭೇಟಿ ನೀಡಿ ಕಛೇರಿಯ ಅಲ್ಮೇರಾಗಳನ್ನು ತಮ್ಮ ವಶಕ್ಕೆ ನೀಡಲು ಅವುಗಳ ಬೀಗದ ಕೀಗಳು ಇಲ್ಲದ ಪ್ರಯುಕ್ತ ಖಾಸಗಿ ಬೀಗ ತೆಗೆಯುವವರನ್ನು ಕರೆಸಿ ನಾಲ್ಕು ಅಲ್ಮೇರಾಗಳ ಬೀಗಗಳನ್ನು ತೆಗೆಸಿನೋಡಲಾಗಿ, ಅದರಲ್ಲಿ ಬ್ಯಾಂಕ್ ಆಫ್ ಬರೋಡಾ ಉಳಿತಾಯ ಖಾತೆ ಸಂಖ್ಯೆ : 13330100002558 ಇದರ ಪಾಸ್ ಬುಕ್ ಮತ್ತು ಚೆಕ್ ನಂ. 169633,169635, 169636 ರಿಂದ 169640 ಇವುಗಳು ಅಲ್ಮೇರಾದಲ್ಲಿ ಇರಲಿಲ್ಲ ಮತ್ತು ಯಾವುದೇ ನಗದು ಹಣ ಇರಲಿಲ್ಲ. ಆದುದರಿಂದ ಅವುಗಳನ್ನು ಅವರ ವಶಕ್ಕೆ ಕೊಟ್ಟಿರುವುದಿಲ್ಲ. ಆಪಾದಿತರು ಕಛೇರಿಯ ಉಳಿತಾಯ ಖಾತೆ ಹಣ ತೆಗೆಯಲು ಬ್ಯಾಂಕಿನಿಂದ ಪಡೆದ ಚೆಕ್ ಕ್ರಮ ಸಂಖ್ಯೆ : 169631 ರಿಂದ 169640 ಒಟ್ಟು 10 ಚೆಕ್‌ಗಳ ಹಾಳೆಗಳಲ್ಲಿ ಅವರು ದುರುಪಯೋಗಪಡಿಸಿಕೊಂಡ ಚೆಕ್ ಸಂಖ್ಯೆಗಳನ್ನು ಹೊರತುಪಡಿಸಿ ಉಳಿಕೆ ಆರು ಚೆಕ್‌ಗಳನ್ನು ಕಛೇರಿಯಲ್ಲಿಡದೆ ಪಾಸ್ ಬುಕ್‌ನೊಂದಿಗೆ ತಮ್ಮ ವೈಯುಕ್ತಿಕ ಕೆಲಸಗಳಿಗೆ ಉಪಯೋಗಿಸಿಕೊಳ್ಳಲು ತಮ್ಮೊಂದಿಗೆ ತೆಗೆದುಕೊಂಡು ಹೋಗಿ ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು ರುಜುವಾತಾಗಿರುತ್ತದೆ. ಆಪಾದಿತರು ದಿನಾಂಕ : 09–12–2009 ರಿಂದ ಇಲ್ಲಿಯವರೆಗೆ ಪೂರ್ವಾನುಮತಿ ಪಡೆಯದೆ ಮತ್ತು ರಜಾ ಅರ್ಜಿಗಳನ್ನು ಸಲ್ಲಿಸದೆ ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಪ್ರಕರಣದ ಎಲ್ಲಾ ಸಾಕ್ಷ್ಯಾಧಾರಗಳನ್ನು ಮತ್ತು ಸಂದರ್ಭ ಸನ್ನಿವೇಶಗಳನ್ನು ಪರಿಶೀಲಿಸಿ, ಗಣನೆಗೆ ತೆಗೆದುಕೊಂಡು, ಆಪಾದಿತರು ಸರ್ಕಾರಿ ನೌಕರನಲ್ಲದ ರೀತಿಯಲ್ಲಿ ವರ್ತಿಸಿ, ಕ.ನಾ.ಸೇ (ನಡತೆ) ನಿಯಮಗಳು, 1966ರ ನಿಯಮ 3(i)(ii)(iii) ಗಳನ್ನು ಉಲ್ಲಂಘಿಸಿದ್ದು, ದಿನಾಂಕ : 09–12–2009 ರಿಂದ ಇಲ್ಲಿಯವರೆಗೂ ಅನಧಿಕೃತ ಗೈರುಹಾಜರಾಗಿದ್ದು, ಕ.ನಾ.ಸೇ ನಿಯಮಗಳು, 1957ರ ನಿಯಮ 108 ರನ್ವಯ ನಾಲ್ಕು ತಿಂಗಳಿಗಿಂತ ಹೆಚ್ಚುವರಿಯಾಗಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾದ ಪಕ್ಷದಲ್ಲಿ ಅಂತಹವರನ್ನು ಕೆಲಸದಿಂದ ತೆಗೆದುಹಾಕುವಂತಹ ಶಿಕ್ಷೆಗೆ ಒಳಪಡಿಸಬಹುದಾಗಿದೆ ಎಂದು ಅಭಿಪ್ರಾಯ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ 3 ದಿನಾಂಕ : 08–06–2012 ರಲ್ಲಿ ಆಪಾದಿತರಿಗೆ 2ನೇ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಿ ವಿಚಾರಣಾ ವರದಿಯ ಕುರಿತು ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಕೋರಲಾಯಿತು. ಆದರೆ ಆರೋಪಿತ ಅಧಿಕಾರಿಯಿಂದ ಯಾವುದೇ ಲಿಖಿತ ಸಮಜಾಯಿಷಿ ಬಂದಿರುವುದಿಲ್ಲ. ಪ್ರಕರಣವನ್ನು ಪರಿಶೀಲಿಸಲಾಗಿ ವಿಚಾರಣೆಯನ್ನು ನಿಯಮಾನುಸಾರ ನಡೆಸಿರುವುದು ಹಾಗೂ ಆರೋಪಿಗೆ ಎಲ್ಲ ವಿಚಾರಣೆಯ ನೋಟೀಸು ನೀಡಿರುವುದು, ಸಾಕ್ಷಿಗಳ ವಿಚಾರಣೆ ದಾಖಲೆಗಳ ಪರಾಮರ್ಶೆ ಇತ್ಯಾದಿಗಳನ್ನು ಪಾಲಿಸಿ ವಿಚಾರಣೆ ನಡೆಸಿರುವುದು ಕಂಡುಬರುತ್ತದೆ. ಆದ್ದರಿಂದ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಳ್ಳಲಾಗಿದೆ.

ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡು ಪಲಾಯನ ಮಾಡಿದ ವ್ಯಕ್ತಿಯನ್ನು ಸರ್ಕಾರಿ ಸೇವೆಯಲ್ಲಿ ಉಳಿಸಿಕೊಳ್ಳುವುದು ಸೂಕ್ತವಲ್ಲ. ಆದ್ದರಿಂದ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ನಿರ್ಣಯಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 03 ವಾತೆತ 2010, ಬೆಂಗಳೂರು, ದಿನಾಂಕ : 05–08–2013**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8 (iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಡಿ.ಆರ್. ರೇಣುಕಾನಂದ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಅಳವಂಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ–2 & ಸಮನ್ವಯ).

**PR. 1039**

## ಆರ್ಥಿಕ ಸಚಿವಾಲಯ

**ವಿಷಯ :** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ :**

1. ಸ. ಆ. ಸಂಖ್ಯೆ : ಎಫ್‌ಡಿ 23 ಎಸ್‌ಆರ್‌ಪಿ 2011, ದಿನಾಂಕ : 15–06–2011.
2. ಸ. ಆ. ಸಂಖ್ಯೆ : ಎಫ್‌ಡಿ 07 ಎಸ್‌ಆರ್‌ಪಿ 2012, ದಿನಾಂಕ : 21–04–2012.
3. ಸ. ಆ. ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 2012, ದಿನಾಂಕ : 14–05–2012.
4. ಸ. ಆ. ಸಂಖ್ಯೆ : ಎಫ್‌ಡಿ 25 ಎಸ್‌ಆರ್‌ಪಿ 2012, ದಿನಾಂಕ : 17–10–2012.
5. ಸ. ಆ. ಸಂಖ್ಯೆ : ಎಫ್‌ಡಿ 09 ಎಸ್‌ಆರ್‌ಪಿ 2013, ದಿನಾಂಕ : 08–05–2013.
6. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಇವರ ಪತ್ರ ಸಂಖ್ಯೆ : ಜಿಇಎ 682/2013–14, ದಿನಾಂಕ : 27–09–2013.

**ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 21 ಎಸ್‌ಆರ್‌ಪಿ 2013, ಬೆಂಗಳೂರು, ದಿನಾಂಕ : 3ನೇ ಅಕ್ಟೋಬರ್ 2013.**

ರಾಜ್ಯ ಸರ್ಕಾರಿ ನೌಕರರುಗಳಿಗೆ 2012ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ 1ನೇ ಜುಲೈ 2013 ರಿಂದ ಜಾರಿಗೆ ಬರುವಂತೆ ತುಟ್ಟಿ ಭತ್ಯೆಯ ದರವನ್ನು ಮೂಲ ವೇತನದ ಶೇಕಡ 9 ರಿಂದ ಶೇಕಡ 15ಕ್ಕೆ ಹೆಚ್ಚಿಸಿ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ.

3. ತುಟ್ಟಿಭತ್ಯೆಯ ಉದ್ದೇಶಕ್ಕಾಗಿ **"ಮೂಲ ವೇತನ"** ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುತ್ತಿರುವ ವೇತನ ಮತ್ತು ಅದರಲ್ಲಿ.

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ.

(ಆ) 2012ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ,

(ಇ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಮಂಜೂರು ಮಾಡಲಾಗಿರುವ ಹೆಚ್ಚುವರಿ ವೇತನ ಬಡ್ತಿ ಯಾವುದಾದರೂ ಇದ್ದಲ್ಲಿ, ಅವುಗಳು ಸೇರುತ್ತವೆ.

4. ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

5. ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ **ಶೇಕಡ 9 ರಿಂದ ಶೇಕಡ 15ಕ್ಕೆ** ಹೆಚ್ಚಿಸಿ ದಿನಾಂಕ : **1ನೇ ಜುಲೈ 2013** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

6. ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿದ್ದ ಪಿಂಚಣಿದಾರರು/ಕುಟುಂಬ ಪಿಂಚಣಿದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ **ಶೇಕಡ 9 ರಿಂದ ಶೇಕಡ 15ಕ್ಕೆ** ಹೆಚ್ಚಿಸಿ ದಿನಾಂಕ : **1ನೇ ಜುಲೈ 2013** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

7. ಯುಜಿಸಿ/ಎಐಸಿಟಿಇ/ಐಸಿಎಆರ್/ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ನೌಕರರಿಗೆ ಮತ್ತು ಎನ್‌ಜೆಪಿಸಿ ಪಿಂಚಣಿದಾರರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಆದೇಶಗಳನ್ನು ಹೊರಡಿಸಲಾಗುವುದು.

8. ಈ ಆದೇಶದ ಮೇರೆಗೆ ಲಭ್ಯವಿರುವ ತುಟ್ಟಿಭತ್ಯೆಯನ್ನು ನಗದಾಗಿ ಪಾವತಿ ಮಾಡಲಾಗುವುದು.

9. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

10. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2).

## FINANCE SECRETARIAT

**Sub** : Revision of the rates of Dearness Allowance-reg.

**READ :**
1. G.O. No. FD 23 SRP 2011, dated : 15-06-2011.
2. G.O. No. FD 07 SRP 2012, dated : 21-04-2012.
3. G.O. No. FD 17 SRP 2012, dated : 14-05-2012.
4. G.O. No. FD 25 SRP 2012, dated : 17-10-2012.
5. G.O. No. FD 09 SRP 2013, dated : 08-05-2013.

**GOVERNMENT ORDER NO. FD 21 SRP 2013, BANGALORE, DATED : 3RD OCTOBER 2013.**

Government are pleased to sanction increase in the rates of Dearness Allowance payable to the State Government employees in the Revised Pay Scales 2012 from the existing **9% to 15% of Basic Pay** with effect from **1st July 2013**.

2. These orders will apply to the full time Government employees, employees of Zilla Panchayats, work charged employees on regular time scales of pay, full time employees of aided educational Institutions and Universities who are on regular time scales of pay.

3. For the purpose of grant of Dearness Allowance, the term 'Basic Pay' means, pay drawn by a Government Employee in the scale of pay applicable to the post held by him and includes :

a. Stagnation increment, if any, granted to him above the maximum of the scale of pay.

b. Personal Pay, if any, granted to him under sub-rule (3) of Rule 7 of the Karnataka Civil Services (Revised Pay) Rules, 2012.

c. Additional increment, if any, granted to him above the maximum of the scale of pay.

4. Basic Pay shall not include any emoluments other than those specified above.

5. Government are also pleased to sanction increase in the rates of Dearness Allowance from the existing **9 % to 15%** of the basic pension/family pension with effect from 1st July 2013 to the State Government pensioners/family pensioners and pensioners/family pensioners of the aided educational institutions whose pension/family pension is paid out of the Consolidated Fund of the State.

6. Government are also pleased to sanction increase in the rates of Dearness Allowance from the existing **9% to 15%** of the basic pension/family pension with effect from 1st July 2013 to the pensioners/family pensioners who were drawing pay in the UGC/AICTE/ICAR scales of pay.

7. Separate orders will be issued in respect of employees on UGC/AICTE/ICAR/NJPC scales of pay and also in respect of NJPC pensioners.

8. The increase in Dearness Allowance admissible under this order is payable in cash.

9. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

10. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka
**SUNDARA RAJA GUPTHA**
Joint Secretary to Government,
Finance Department (Services-2).

**P.R. 1040**
**SC-500**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ನಕ್ಸಲ್ ಬಾಧಿತ ತಾಲ್ಲೂಕುಗಳ ಸರ್ವಾಂಗೀಣ ಅಭಿವೃದ್ಧಿಗಾಗಿ 2013-14ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಯೋಇ 77 ಯೋವಿವಿ 2012, ದಿನಾಂಕ: 03-09-2012

2. ಸರ್ಕಾರದ ಆದೇಶ ಸಂಖ್ಯೆ: ಯೋಇ 77 ಯೋವಿವಿ 2012, ದಿನಾಂಕ: 16-03-2013

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದ ನಕ್ಸಲ್ ಪೀಡಿತ ಪ್ರದೇಶಗಳ ಸರ್ವತೋಮುಖ ಅಭಿವೃದ್ಧಿಗಾಗಿ ರೂ. 4500.00 ಲಕ್ಷಗಳನ್ನು ರಾಜ್ಯದ 5 ಜಿಲ್ಲೆಗಳ 9 ತಾಲ್ಲೂಕುಗಳಿಗೆ ತಲಾ ರೂ. 500.00 ಲಕ್ಷಗಳನ್ನು ನಿಗದಿಪಡಿಸಿ ಮೊದಲನೆ ಕಂತಿನ ಮೊತ್ತವಾಗಿ ತಲಾ ರೂ. 250.00 ಲಕ್ಷಗಳಂತೆ ಒಟ್ಟು ರೂ. 2250.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿತ್ತು. ಮುಂದುವರೆದು ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ 5 ಜಿಲ್ಲೆಗಳ 8 ತಾಲ್ಲೂಕುಗಳಿಗೆ ತಲಾ ರೂ. 125.00 ಲಕ್ಷಗಳಂತೆ ರೂ. 1000.00 ಲಕ್ಷಗಳನ್ನು ಹಾಗೂ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿಗೆ ರೂ. 250.00 ಲಕ್ಷಗಳನ್ನು ಸೇರಿಸಿ ಒಟ್ಟು ರೂ. 1250.00 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಲಾಗಿದ್ದು, ಈವರೆಗೆ ಬಿಡುಗಡೆಗೊಳಿಸಿದ ಅನುದಾನದ ವಿವರಗಳು ಈ ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಜಿಲ್ಲೆ | ತಾಲ್ಲೂಕು | ಒದಗಿಸಿರುವ ಅನುದಾನ (ರೂ. ಲಕ್ಷಗಳಲ್ಲಿ) | ಈವರೆಗೆ ಬಿಡುಗಡೆಗೊಳಿಸಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | ತುಮಕೂರು | ಪಾವಗಡ | 500.00 | 375.00 |
| 2 | ಶಿವಮೊಗ್ಗ | ತೀರ್ಥಹಳ್ಳಿ | 500.00 | 375.00 |
| | | ಹೊಸನಗರ | 500.00 | 375.00 |
| 3 | ಚಿಕ್ಕಮಗಳೂರು | ಶೃಂಗೇರಿ | 500.00 | 375.00 |
| | | ಮೂಡಿಗೆರೆ | 500.00 | 375.00 |
| | | ಕೊಪ್ಪ | 500.00 | 500.00 |
| 4 | ಉಡುಪಿ | ಕಾರ್ಕಳ | 500.00 | 375.00 |
| | | ಕುಂದಾಪುರ | 500.00 | 375.00 |
| 5 | ದಕ್ಷಿಣ ಕನ್ನಡ | ಬೆಳ್ತಂಗಡಿ | 500.00 | 375.00 |
| **ಒಟ್ಟು** | | | **4500.00** | **3500.00** |

ಪ್ರಸ್ತುತ 2013–14ರ ಆರ್ಥಿಕ ವರ್ಷದಲ್ಲಿ ಈ ಯೋಜನೆಗೆ ರೂ. 1000.00 ಲಕ್ಷಗಳನ್ನು ಆಯವ್ಯಯದಲ್ಲಿ ಒದಗಿಸಲಾಗಿದ್ದು, ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿಗೆ ಈಗಾಗಲೇ ನಿಗದಿಪಡಿಸಿದಂತೆ ಪೂರ್ಣ ಮೊತ್ತವನ್ನು ಬಿಡುಗಡೆಗೊಳಿಸಿದ್ದು, ಉಳಿದ 5 ಜಿಲ್ಲೆಗಳ 8 ತಾಲ್ಲೂಕುಗಳಿಗೆ ಉಳಿದ ಅನುದಾನ ಬಿಡುಗಡೆ ಮಾಡಬೇಕಾಗಿದ್ದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 77 ಪಿಎಂಎಂ 2012, ಬೆಂಗಳೂರು, ದಿನಾಂಕ : 8ನೇ ಅಕ್ಟೋಬರ್, 2013**

2013–14ನೇ ಸಾಲಿನಲ್ಲಿ ರಾಜ್ಯದ ನಕ್ಸಲ್ ಪೀಡಿತ ಪ್ರದೇಶಗಳ ಸರ್ವತೋಮುಖ ಅಭಿವೃದ್ಧಿಗಾಗಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಲೆಕ್ಕಶೀರ್ಷಿಕೆ 4515–00–101–1–04–132 (ಯೋಜನೆ) ಅಡಿ ಒಟ್ಟು ರೂ. 500.00 ಲಕ್ಷಗಳನ್ನು (ಐದುನೂರು ಲಕ್ಷಗಳು ಮಾತ್ರ) ಈ ಕೆಳಕಂಡ 5 ಜಿಲ್ಲೆಗಳ 8 ತಾಲ್ಲೂಕುಗಳ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ತಾಲ್ಲೂಕು | ಪ್ರಸ್ತುತ ಬಿಡುಗಡೆಗೊಳಿಸುತ್ತಿರುವ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 1 | ತುಮಕೂರು | ಪಾವಗಡ | 62.50 |
| 2 | ಶಿವಮೊಗ್ಗ | ತೀರ್ಥಹಳ್ಳಿ | 62.50 |
| | | ಹೊಸನಗರ | 62.50 |
| 3 | ಚಿಕ್ಕಮಗಳೂರು | ಶೃಂಗೇರಿ | 62.50 |
| | | ಮೂಡಿಗೆರೆ | 62.50 |
| 4 | ಉಡುಪಿ | ಕಾರ್ಕಳ | 62.50 |
| | | ಕುಂದಾಪುರ | 62.50 |
| 5 | ದಕ್ಷಿಣ ಕನ್ನಡ | ಬೆಳ್ತಂಗಡಿ | 62.50 |
| **ಒಟ್ಟು** | | | **500.00** |

ಈ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 283 ಎಸ್‌ಎಸ್‌ಟಿ 2012, ದಿನಾಂಕ: 29–06–2012 ಮತ್ತು 17–07–2012ರನ್ವಯ ಅನುಷ್ಠಾನಗೊಳಿಸತಕ್ಕದ್ದು.

ಪ್ರತಿ ಮಾಹೆ ಮಾಸಿಕ ವರದಿಯನ್ನು ಸಲ್ಲಿಸತಕ್ಕದ್ದು.

ಬಿಡುಗಡೆಯಾದ ಈ ಅನುದಾನವನ್ನು ಜಿಲ್ಲಾಧಿಕಾರಿಗಳ ವೈಯಕ್ತಿಕ ಠೇವಣಿ ಖಾತೆಯಲ್ಲಿಟ್ಟುಕೊಂಡು ಅಗತ್ಯತೆಗೆ ಅನುಗುಣವಾಗಿ ವೆಚ್ಚ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 2013, ದಿನಾಂಕ: 10–05–2013ರಲ್ಲಿ ತಿಳಿಸಿರುವಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

P.R. 1041

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ರಾಜ್ಯದಲ್ಲಿ 6ನೇ ಆರ್ಥಿಕ ಗಣತಿ ಮತ್ತು ಸಾಮಾನ್ಯ ವ್ಯವಹಾರ ದಾಖಲೆ ವಹಿಯನ್ನು ಕೈಗೊಳ್ಳುವ ಬಗ್ಗೆ

**ಓದಲಾಗಿದೆ :**

1. ಭಾರತ ಸರ್ಕಾರದ ಸಾಂಖ್ಯಿಕ ಮತ್ತು ಕಾರ್ಯಕ್ರಮ ಅನುಷ್ಠಾನ ಮಂತ್ರಾಲಯ, ನವದೆಹಲಿ, ಇವರ ಪತ್ರ ಸಂಖ್ಯೆ: N-11015/7-2/2010/ESD-VI EC, ದಿನಾಂಕ: 15–03–2012 ಮತ್ತು 11016/1–35/2011–ESD-VI EC, ದಿನಾಂಕ: 11–03–2013
2. ಕಾರ್ಯದರ್ಶಿ, ಭಾರತ ಸರ್ಕಾರದ ಸಾಂಖ್ಯಿಕ ಮತ್ತು ಕಾರ್ಯಕ್ರಮ ಅನುಷ್ಠಾನ ಮಂತ್ರಾಲಯ, ನವದೆಹಲಿ ಇವರ ಅರೆಸರ್ಕಾರಿ ಪತ್ರ ಸಂಖ್ಯೆ: N-11016/1-35/2011/ESD-Vi EC, ದಿನಾಂಕ : 27–12–2012
3. ಸರ್ಕಾರದ ಆದೇಶ ಸಂಖ್ಯೆ: ಪಿಡಿ 83 ಎಸ್‌ಎಮ್‌ಸಿ 2011, ಬೆಂಗಳೂರು, ದಿನಾಂಕ: 21–07–2011
4. ಸರ್ಕಾರದ ಆದೇಶ ಸಂಖ್ಯೆ: ಪಿಡಿ 83 ಎಸ್‌ಎಮ್‌ಸಿ 2011(1), ಬೆಂಗಳೂರು, ದಿನಾಂಕ: 21–07–2011
5. ಸರ್ಕಾರದ ಆದೇಶ ಸಂಖ್ಯೆ: ಪಿಡಿ 83 ಎಸ್‌ಎಮ್‌ಸಿ 2011(2), ಬೆಂಗಳೂರು, ದಿನಾಂಕ: 21–07–2011
6. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕಡತ ಸಂಖ್ಯೆ: ಆಸಾಂನಿ 11 ಆಗ 2013, ದಿನಾಂಕ: 17–08–2013

ಭಾರತ ಸರ್ಕಾರದ ಸಾಂಖ್ಯಿಕ ಮತ್ತು ಕಾರ್ಯಕ್ರಮ ಅನುಷ್ಠಾನ ಮಂತ್ರಾಲಯವು ರಾಜ್ಯದಲ್ಲಿ 6ನೇ ಆರ್ಥಿಕ ಗಣತಿಯನ್ನು ಕೈಗೊಳ್ಳಲು ಉದ್ದೇಶಿಸಿ, ಮೇಲೆ ಓದಲಾದ ಕ್ರಮಸಂಖ್ಯೆ(1)ರ ಪತ್ರಗಳ ಮೂಲಕ ಶೇ. 100ರಷ್ಟು ಅನುದಾನದೊಂದಿಗೆ ಒಟ್ಟು 3371.78 ಲಕ್ಷಗಳನ್ನು ಮಂಜೂರು ಮಾಡಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿರುತ್ತದೆ. ಅನುದಾನದ ಐಟಂವಾರು ವಿವರಗಳನ್ನು ಸದರಿ ಪತ್ರಗಳ ಅನುಬಂಧದಲ್ಲಿ ನೀಡಲಾಗಿದೆ.

ಈ ಆರ್ಥಿಕ ಗಣತಿಯ ಕಾರ್ಯವನ್ನು ರಾಜ್ಯದಲ್ಲಿ ನಡೆಸುವ ಬಗ್ಗೆ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರು ನೋಡಲ್ ಅಧಿಕಾರಿಯಾಗಿರುತ್ತಾರೆ. ಈ ಆರ್ಥಿಕ ಗಣತಿಯನ್ನು ಸುಸೂತ್ರವಾಗಿ ನಡೆಸಲು ರಾಜ್ಯಮಟ್ಟದಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರನ್ನು ಮೇಲೆ ಓದಲಾದ ಕ್ರಮಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ರಾಜ್ಯಮಟ್ಟದ ಚಾಲನಾ ಸಮಿತಿಯ ಅಧ್ಯಕ್ಷರು ಹಾಗೂ ಪದನಿಮಿತ್ತ ಮುಖ್ಯ ಆರ್ಥಿಕ ಗಣತಿಯ ಆಯುಕ್ತರಾಗಿ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (4)ರ ಸರ್ಕಾರದ ಆದೇಶದಲ್ಲಿ ಜಿಲ್ಲಾಮಟ್ಟದ ಉಸ್ತುವಾರಿ ಸಮಿತಿಯನ್ನು ರಚಿಸಿ, ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳನ್ನು ಉಸ್ತುವಾರಿ ಸಮಿತಿಯ ಅಧ್ಯಕ್ಷರನ್ನಾಗಿ ಹಾಗೂ ಪದನಿಮಿತ್ತ ಜಿಲ್ಲಾ ಆರ್ಥಿಕ ಗಣತಿ ಆಯುಕ್ತರನ್ನಾಗಿ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (5)ರ ಸರ್ಕಾರದ ಆದೇಶದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಉಸ್ತುವಾರಿ ಸಮಿತಿಯನ್ನು ರಚಿಸಿ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿ.ಬಿ.ಎಂ.ಪಿ.) ಇವರನ್ನು ಉಸ್ತುವಾರಿ ಸಮಿತಿಯ ಅಧ್ಯಕ್ಷರನ್ನಾಗಿ ಹಾಗೂ ಪದನಿಮಿತ್ತ ಬೆಂಗಳೂರು ಮಹಾನಗರ ಪಾಲಿಕೆಯ ಆರ್ಥಿಕ ಗಣತಿಯ ಆಯುಕ್ತರನ್ನಾಗಿ ನೇಮಿಸಲಾಗಿದೆ.

ಈ ಆರ್ಥಿಕ ಗಣತಿಯನ್ನು ರಾಜ್ಯದಾದ್ಯಂತ ಕೈಗೊಳ್ಳಲು ಸುಮಾರು 42.311 ಗಣತಿದಾರರನ್ನು ನಿಯೋಜಿಸಿಕೊಳ್ಳಬೇಕಾಗಿರುತ್ತದೆ. ಈ 42.311 ಗಣತಿದಾರರನ್ನು ಸರ್ಕಾರದ ವಿವಿಧ ಇಲಾಖೆಯಿಂದ ನೇಮಕ ಮಾಡಿಕೊಂಡು ಆರ್ಥಿಕ ಗಣತಿ ಕಾರ್ಯವನ್ನು ಕೈಗೊಳ್ಳಲು ರಾಜ್ಯದ 30 ಜಿಲ್ಲೆಗಳ ವ್ಯಾಪ್ತಿಯಲ್ಲಿ ಆಯಾ ಜಿಲ್ಲಾಧಿಕಾರಿಗಳಿಗೆ ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿ.ಬಿ.ಎಂ.ಪಿ.) ವ್ಯಾಪ್ತಿಯಲ್ಲಿ ಆಯುಕ್ತರು, ಬಿ.ಬಿ.ಎಂ.ಪಿ. ಇವರಿಗೆ ಅಧಿಕಾರ ನೀಡಲು ಪ್ರಸ್ತಾಪಿಸಲಾಗಿದೆ. ಇವರುಗಳಿಗೆ ಸ್ಥಳೀಯವಾಗಿ ಲಭ್ಯವಾಗುವ ಕನಿಷ್ಠ 10+2 ವಿದ್ಯಾರ್ಹತೆ ಹೊಂದಿರುವ ನಿವೃತ್ತ ಸರ್ಕಾರಿ ಸಿಬ್ಬಂದಿ, ಆಶಾ ಕಾರ್ಯಕರ್ತೆಯರು, ಅಂಗನವಾಡಿ ಕಾರ್ಯಕರ್ತೆಯರು, ವಿವಿಧ ಇಲಾಖೆಗಳ ಕ್ಷೇತ್ರ ಮಟ್ಟದ ಸಿಬ್ಬಂದಿಯವರು, ರೈತ ಅನುವುಗಾರರು ಇತ್ಯಾದಿಯವರನ್ನು ಗಣತಿದಾರರಾಗಿ ನೇಮಕ ಮಾಡಿ, ಆರ್ಥಿಕ ಗಣತಿ ಕಾರ್ಯ ಪೂರ್ಣಗೊಳಿಸುವ ಜವಾಬ್ದಾರಿ ವಹಿಸಲು ಪ್ರಸ್ತಾಪಿಸಲಾಗಿದೆ. ಹಾಗೊಂದು ವೇಳೆ ಮೇಲಿನ ಮೂಲದಿಂದ ಅಗತ್ಯಕ್ಕಿಂತ ಕಡಿಮೆ ಗಣತಿದಾರರು ಲಭ್ಯವಾದ ಪಕ್ಷದಲ್ಲಿ ಸಂಬಂಧಿಸಿದ ಜಿಲ್ಲಾಧಿಕಾರಿಗಳು/ಆಯುಕ್ತರು, ಬಿ.ಬಿ.ಎಂ.ಪಿ. ರವರು ನೇರ ಸಂದರ್ಶನದ ಮೂಲಕ ನಿರುದ್ಯೋಗಿ ಪದವೀಧರರು, ಕಾಲೇಜು ವಿದ್ಯಾರ್ಥಿಗಳು, ಸಮ್ಮತಿ ಇರುವ ಖಾಸಗಿ ಶಾಲಾ ಶಿಕ್ಷಕರು, ಇತ್ಯಾದಿಯವರನ್ನು ಗಣತಿದಾರರನ್ನಾಗಿ ನೇಮಿಸಿಕೊಂಡು ಆರ್ಥಿಕ ಗಣತಿ ಕಾರ್ಯವನ್ನು ಪೂರ್ಣಗೊಳಿಸಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಾಗೂ ಆಯುಕ್ತರು, ಬಿ.ಬಿ.ಎಂ.ಪಿ.ರವರಿಗೆ ಅನುಮತಿ ನೀಡಲು ಉದ್ದೇಶಿಸಿದೆ.

13ನೇ ಹಣಕಾಸಿನ ಅನುದಾನದಡಿಯಲ್ಲಿ ಲಭ್ಯವಿರುವ ರೂ. 562.50 ಲಕ್ಷಗಳ ಖರ್ಚಿನಲ್ಲಿ ಸಾಮಾನ್ಯ ವ್ಯವಹಾರ ದಾಖಲೆ ವಹಿಯನ್ನು ಈ ಆರ್ಥಿಕ ಗಣತಿ ಕಾರ್ಯದೊಂದಿಗೆ ಮಾಡಲು ಸಹ ಉದ್ದೇಶಿಸಲಾಗಿದೆ.

ಆರ್ಥಿಕ ಗಣತಿಯಲ್ಲಿ ಸಂಗ್ರಹಿಸಿದ ಮಾಹಿತಿಯ ಡಾಟಾ ಎಂಟ್ರಿಯನ್ನು ಕಿಯೋನಿಕ್ಸ್ ಮೂಲಕ ಜಿಲ್ಲಾ ಮಟ್ಟದಲ್ಲಿ ಮಾಡಿಸಲು ಸಹ ಪ್ರಸ್ತಾಪಿಸಲಾಗಿದೆ.

ಮೇಲಿನ ಪ್ರಸ್ತಾವನೆಗಳನ್ನು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕಡತ ಸಂಖ್ಯೆ: ಆಸಾಂನಿ 11 ಆಗ 2013ರಲ್ಲಿ ಪ್ರಸ್ತಾಪಿಸುತ್ತಾ ಈ ಪ್ರಸ್ತಾವನೆಗಳಿಗೆ ಸರ್ಕಾರದ ಅನುಮೋದನೆ ನೀಡಿ ಆದೇಶ ಹೊರಡಿಸುವಂತೆ ಕೋರಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ ರಾಜ್ಯದಲ್ಲಿ 6ನೇ ಆರ್ಥಿಕ ಗಣತಿ ಕಾರ್ಯ ಹಾಗೂ ವ್ಯವಹಾರ ದಾಖಲೆವಹಿಯನ್ನು ನಿಗಧಿತ ಅವಧಿಯಲ್ಲಿ ಕೈಗೊಳ್ಳಲು ಸರ್ಕಾರದ ಅನುಮತಿಯನ್ನು ನೀಡಲು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಪಿಡಿ 119 ಎಸ್‌ಎಂಸಿ 2013, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ 6ನೇ ಆರ್ಥಿಕ ಗಣತಿ ಕಾರ್ಯ ಮತ್ತು ಸಾಮಾನ್ಯ ವ್ಯವಹಾರ ದಾಖಲೆವಹಿಯನ್ನು ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ಅವಧಿಯೊಳಗೆ ಕೈಗೊಳ್ಳಲು ಅನುವಾಗುವಂತೆ ಕೆಳಕಂಡ ಅಂಶಗಳ ಬಗ್ಗೆ ಸರ್ಕಾರದ ಅನುಮೋದನೆಯನ್ನು ನೀಡಿದೆ.

1. ರಾಜ್ಯದ ಎಲ್ಲಾ 30 ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಮತ್ತು ಆಯುಕ್ತರು, ಬಿ.ಬಿ.ಎಂ.ಪಿ. ರವರಿಗೆ ಅವರ ಕಾರ್ಯವ್ಯಾಪ್ತಿಯಲ್ಲಿ 6ನೇ ಆರ್ಥಿಕ ಗಣತಿ ಕಾರ್ಯ ಹಾಗೂ ಸಾಮಾನ್ಯ ವ್ಯವಹಾರ ದಾಖಲೆ ವಹಿಯ ಕಾರ್ಯವನ್ನು ಕೈಗೊಂಡು ಪೂರ್ಣಗೊಳಿಸುವ ಜವಾಬ್ದಾರಿಯನ್ನು ನೀಡಿ, ಸ್ಥಳೀಯವಾಗಿ ಲಭ್ಯವಾಗುವ ಕನಿಷ್ಠ 10+2 ವಿದ್ಯಾರ್ಹತೆ ಇರುವ ನಿವೃತ್ತ ಸರ್ಕಾರಿ ಸಿಬ್ಬಂದಿ, ಆಶಾ ಕಾರ್ಯಕರ್ತೆಯರು, ವಿವಿಧ ಇಲಾಖೆಗಳ ಕ್ಷೇತ್ರ ಮಟ್ಟದ ಸಿಬ್ಬಂದಿಯವರು, ರೈತ ಅನುವುಗಾರರು, ಇತ್ಯಾದಿಯವರನ್ನು ಗಣತಿದಾರರನ್ನಾಗಿ ನೇಮಕ ಮಾಡಿಕೊಳ್ಳಲು ಅಧಿಕಾರ ನೀಡಲಾಗಿದೆ.

2. ಹಾಗೊಂದು ವೇಳೆ ಮೇಲಿನ ಮೂಲಗಳಿಂದ ಅಗತ್ಯಕ್ಕಿಂತ ಕಡಿಮೆ ಗಣತಿದಾರರು ಲಭ್ಯವಾದ ಪಕ್ಷದಲ್ಲಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಹಾಗೂ ಆಯುಕ್ತರು, ಬಿ.ಬಿ.ಎಂ.ಪಿ. ರವರು ನೇರ ಸಂದರ್ಶನದ ಮೂಲಕ ನಿರುದ್ಯೋಗಿ ಪದವೀಧರರು, ಕಾಲೇಜು ವಿದ್ಯಾರ್ಥಿಗಳು, ಸಮ್ಮತಿ ಇರುವ ಖಾಸಗಿ ಶಾಲಾ ಶಿಕ್ಷಕರು, ಇತ್ಯಾದಿಯವರನ್ನು ಗಣತಿದಾರರಾಗಿ ನೇಮಿಸಿಕೊಂಡು ಆರ್ಥಿಕ ಗಣತಿ ಕಾರ್ಯವನ್ನು ಪೂರ್ಣಗೊಳಿಸಲು ಅಧಿಕಾರ ನೀಡಲಾಗಿದೆ.

3. ಆರ್ಥಿಕ ಗಣತಿಯ ಮಾಹಿತಿಯ ಡಾಟಾ ಎಂಟ್ರಿಯನ್ನು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ನೀಡುವ ಸಾಫ್ಟ್‌ವೇರ್‌ನಲ್ಲಿ ಅಳವಡಿಸಲು ಕಿಯೋನಿಕ್ಸ್ ಸಂಸ್ಥೆಗೆ ವಹಿಸಿ ಜಿಲ್ಲಾ ಮಟ್ಟದಲ್ಲಿ ಮತ್ತು ಬಿ.ಬಿ.ಎಂ.ಪಿ. ವಲಯ ಮಟ್ಟದಲ್ಲಿ ಮಾಡಿಸಲು ಜಿಲ್ಲಾಧಿಕಾರಿಗಳಿಗೆ ಹಾಗೂ ಆಯುಕ್ತರು, ಬಿ.ಬಿ.ಎಂ.ಪಿ.ಯವರಿಗೆ ಅಧಿಕಾರ ನೀಡಲಾಗಿದೆ. ಈ ವಿಷಯದಲ್ಲಿ ಒಂದು ಉದ್ಯಮದ ಮಾಹಿತಿ ಡಾಟಾ ಎಂಟ್ರಿ ಮಾಡಲು ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ದರ ತಲಾ ರೂ. 2.00 ಮೀರದಂತೆ ಕ್ರಮ ವಹಿಸಲು ಆದೇಶಿಸಿದೆ.

4. ಭಾರತ ಸರ್ಕಾರದ ಸಾಂಖ್ಯಿಕ ಮತ್ತು ಕಾರ್ಯಕ್ರಮ ಅನುಷ್ಠಾನ ಮಂತ್ರಾಲಯದಿಂದ ರಾಜ್ಯಕ್ಕೆ ನಿಗದಿಪಡಿಸಿರುವ ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2) ರ ಪತ್ರಗಳ ಮೂಲಕ ಶೇ. 100ರಷ್ಟು ಅನುದಾನದೊಂದಿಗೆ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದ ಭಾಗ–1ರಲ್ಲಿ ನಮೂದಿಸಿರುವ ಐಟಂಗಳಿಗೆ ಒಟ್ಟು ರೂ. 3371.78 ಲಕ್ಷಗಳನ್ನು ರಾಜ್ಯದಲ್ಲಿ 6ನೇ ಆರ್ಥಿಕ ಗಣತಿ ಕಾರ್ಯಕ್ಕಾಗಿ ವೆಚ್ಚ ಮಾಡಲು ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರಿಗೆ ಅಧಿಕಾರ ನೀಡಲಾಗಿದೆ.

5. 13ನೇ ಹಣಕಾಸಿನ ಅನುದಾನದಡಿಯಲ್ಲಿ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದ ಭಾಗ–2ರಲ್ಲಿ ನಮೂದಿಸಿರುವ ಐಟಂಗಳಿಗೆ ಒಟ್ಟು ರೂ. 562.50 ಲಕ್ಷಗಳ ಖರ್ಚಿನಲ್ಲಿ ಸಾಮಾನ್ಯ ವ್ಯವಹಾರ ದಾಖಲೆ ವಹಿಯನ್ನು ಆರ್ಥಿಕ ಗಣತಿ ಕಾರ್ಯದೊಂದಿಗೆ ಮಾಡಲು ನಿರ್ದೇಶಕರು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರಿಗೆ ಅಧಿಕಾರ ನೀಡಲಾಗಿದೆ.

6. ಈ ಆದೇಶವನ್ನು ಸಚಿವ ಸಂಪುಟ ಪ್ರಕರಣ ಸಂಖ್ಯೆ ಸಿ: 552/2013 ದಿನಾಂಕ: 20–09–2013ರಲ್ಲಿ ನೀಡಿರುವ ಅನುಮೋದನೆಯನ್ನು ಅನುಸರಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ತಿಪ್ಪೇಸ್ವಾಮಿ,**

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಸರ್ಕಾರಿ ಆದೇಶ ಸಂಖ್ಯೆ : ಪಿಡಿ 119 ಎಸ್‌ಎಂಸಿ 2013, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್, 2013ರ ಅನುಬಂಧ

### ಭಾಗ–1

ಭಾರತ ಸರ್ಕಾರದ ಸಾಂಖ್ಯಿಕ ಮತ್ತು ಕಾರ್ಯಕ್ರಮ ಅನುಷ್ಠಾನ ಮಂತ್ರಾಲಯವು ರಾಜ್ಯದಲ್ಲಿ 6ನೇ ಆರ್ಥಿಕ ಗಣತಿಯನ್ನು ಕೈಗೊಳ್ಳಲು ಉದ್ದೇಶಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರಗಳ ಮೂಲಕ ನೀಡಿದ ಅನುದಾನದ ಐಟಂವಾರು ವಿವರಗಳು.

| | | | |
|---|---|---|---|
| 1. | ಆರ್ಥಿಕ ಗಣತಿ ವಿಭಾಗದ ಸಿಬ್ಬಂದಿಯ ವೇತನಕ್ಕಾಗಿ | : | ರೂ. 102.10 ಲಕ್ಷಗಳು |
| 2. | ಆರ್ಥಿಕ ಗಣತಿಯ ವಿವಿಧ ಹಂತದಲ್ಲಿ ಕಾರ್ಯನಿರ್ವಹಿಸಿದವರಿಗೆ ಗೌರವಧನ | : | ರೂ. 2660.20 ಲಕ್ಷಗಳು |
| 3. | ತರಬೇತಿ ಭತ್ಯೆ | : | ರೂ. 429.33 ಲಕ್ಷಗಳು |
| 4. | ಆರ್ಥಿಕ ಗಣತಿಯಲ್ಲಿ ಗುರುತಿಸಿದ ಉದ್ಯಮಗಳಿಗೆ ಎನ್.ಐ.ಸಿ. ಸಂಕೇತ ನೀಡುವುದಕ್ಕೆ | : | ರೂ. 64.76 ಲಕ್ಷಗಳು |
| 5. | ಅನುಸೂಚಿ 6Cಗಳ ಡಾಟಾ ಎಂಟ್ರಿ ಮಾಡಲು | : | ರೂ. 12.95 ಲಕ್ಷಗಳು |
| 6. | ತರಬೇತಿ ಕೇಂದ್ರಗಳ ನಿರ್ವಹಣಾ ವೆಚ್ಚ | : | ರೂ. 21.30 ಲಕ್ಷಗಳು |
| 7. | ಸೂಚನಾ ಕೈಪಿಡಿ ಮುದ್ರಣಕ್ಕಾಗಿ | : | ರೂ. 36.74 ಲಕ್ಷಗಳು |
| 8. | ಸಾಗಾಟ ಮೊಬೈಲ್ ಫೋನ್ ಇತ್ಯಾದಿ ಖರ್ಚಿಗಾಗಿ | : | ರೂ. 30.00 ಲಕ್ಷಗಳು |
| 9. | ರಾಜ್ಯಮಟ್ಟದ ತರಬೇತಿಗಾಗಿ | : | ರೂ. 2.90 ಲಕ್ಷಗಳು |
| 10. | ಪ್ರಚಾರಕ್ಕಾಗಿ | : | ರೂ. 11.50 ಲಕ್ಷಗಳು |
| | **ಒಟ್ಟು** | : | **ರೂ. 3371.78 ಲಕ್ಷಗಳು** |

### ಭಾಗ–2

13ನೇ ಹಣಕಾಸಿನ ಅನುದಾನದಡಿಯಲ್ಲಿ ಸಾಮಾನ್ಯ ವ್ಯವಹಾರ ದಾಖಲೆ ವಹಿಯನ್ನು 6ನೇ ಆರ್ಥಿಕ ಗಣತಿ ಕಾರ್ಯದೊಂದಿಗೆ ಮಾಡಲು ನಿಗದಿ ಪಡಿಸಿದ ಐಟಂವಾರು ಹಣಕಾಸು ವಿವರಗಳು

| | | | |
|---|---|---|---|
| 1. | ಪ್ರತಿ ಉದ್ಯಮಕ್ಕೆ ರೂ. 7.50ರಂತೆ ಒಟ್ಟು 45 ಲಕ್ಷ ಅಂದಾಜು ಉದ್ಯಮಗಳ ಗಣತಿ ಕಾರ್ಯಕ್ಕಾಗಿ ಗಣತಿದಾರರಿಗೆ ಗೌರವಧನಕ್ಕಾಗಿ | : | ರೂ. 337.50 ಲಕ್ಷಗಳು |
| 2. | ಪ್ರತಿ ಉದ್ಯಮಕ್ಕೆ ರೂ. 1.00ರಂತೆ ಒಟ್ಟು 45 ಲಕ್ಷ ಅಂದಾಜು ಉದ್ಯಮಗಳ ಗಣತಿಯ ಮೇಲ್ವಿಚಾರಕರಿಗೆ ಗೌರವಧನಕ್ಕಾಗಿ | : | ರೂ. 45.00 ಲಕ್ಷಗಳು |
| 3. | ಪ್ರತಿ ಉದ್ಯಮಕ್ಕೆ ರೂ. 2.00ರಂತೆ ಒಟ್ಟು 45 ಲಕ್ಷ ಅಂದಾಜು ಉದ್ಯಮಗಳ ದತ್ತಾಂಶ ಸಿಂಧುತ್ವ ಪರಿಶೀಲನೆ ಮತ್ತು ಎನ್.ಐ.ಸಿ. ಸಂಕೇತ ನೀಡುವ ಸಲುವಾಗಿ ಗೌರವಧನಕ್ಕೆ | : | ರೂ. 90.00 ಲಕ್ಷಗಳು |
| 4. | ಒಟ್ಟು 45 ಲಕ್ಷ ಅಂದಾಜು ಉದ್ಯಮಗಳ ಡಾಟಾ ಎಂಟ್ರಿ ಮಾಡಲು ಪ್ರತಿ ಉದ್ಯಮಕ್ಕೆ ರೂ. 2.00ರಂತೆ | : | ರೂ. 90.00 ಲಕ್ಷಗಳು |
| | **ಒಟ್ಟು** | : | **ರೂ. 562.50 ಲಕ್ಷಗಳು** |

**ಎಸ್. ತಿಪ್ಪೇಸ್ವಾಮಿ,**

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)

**P.R. 1043** ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59.